


ಕನ್ನಡ ವಿಶ್ವವಿದ್ಯಾಲಯ

ಹಂಪಿ


೨೦೧೧-೧೨ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಡಾ. ದೇಜಗೌ ಅವರ ಕಥಾಸಾಹಿತ್ಯ


ನಿಬಂಧಕಾರರು

ಲತಾ ಜೆ.

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಟಿ.ಕೆ.ಕೆಂಪೇಗೌಡ

ಸಹಾಯಕ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮಹಾರಾಜ ಕಾಲೇಜು, ಮೈಸೂರು - ೫





ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೧-೧೨



ಕನ್ನಡ ವಿಶ್ವವಿದ್ಯಾಲಯ
ಹಂಪಿ

೨೦೧೧-೧೨ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಡಾ. ದೇಜಗೌ ಅವರ ಕಥಾಸಾಹಿತ್ಯ

ನಿಬಂಧಕಾರರು

ಲತಾ ಜೆ.

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಟಿ.ಕೆ.ಕೆಂಪೇಗೌಡ

ಕನ್ನಡ ಸಹಾಯಕ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮಹಾರಾಜ ಕಾಲೇಜು, ಮೈಸೂರು- ೫

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೨

# ಅಭ್ಯರ್ಥಿಯ ಘೋಷಣಾ ಪತ್ರ

**"ಡಾ. ದೇಜಗೌ ಅವರ ಕಥಾಸಾಹಿತ್ಯ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00528**ರ ವಿದ್ಯಾರ್ಥಿಯಾದ ನಾನು ೨೦೧೧-೧೨ನೇ ಸಾಲಿನ ಪರೀಕ್ಷೆಗಾಗಿ **ಡಾ. ಟಿ.ಕೆ.ಕೆಂಪೇಗೌಡ,** ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಮಹಾರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Latha J.

**ಮೈಸೂರು**
೩೦-೦೫-೨೦೧೨

**(ಲತಾ ಜೆ.)**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ದೃಢೀಕರಣ ಪತ್ರ

೨೦೧೧-೧೨ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00528**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ಲತಾ ಜೆ** ಅವರು ನನ್ನ ಮಾರ್ಗದರ್ಶನದಲ್ಲಿ **"ಡಾ. ದೇಜಗೌ ಅವರ ಕಥಾಸಾಹಿತ್ಯ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೩೦-೦೫-೨೦೧೨

**(ಡಾ. ಟಿ.ಕೆ.ಕೆಂಪೇಗೌಡ)**
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ, ಮಹಾರಾಜ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೫

# ಡಾ. ದೇಜಗೌ ಅವರ ಕಥಾಸಾಹಿತ್ಯ

## ಪ ರಿ ವಿ ಡಿ



*****

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡದ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರಾದ ಪ್ರೊ. ದೇಜಗೌರವರು ಶ್ರೇಷ್ಠ ಕತೆಗಾರರಾಗಿಯೂ ತಮ್ಮ ಲೇಖನಿಯ ಮೂಲಕ ಅಭಿವ್ಯಕ್ತಪಡಿಸಿದ್ದಾರೆ. ಕಥೆಗಳ ಮೂಲಕ ರೋಗಗ್ರಸ್ಥ ಸಮಾಜಕ್ಕೆ ಮದ್ದು ನೀಡಿದ್ದಾರೆ. ಕನ್ನಡದ ಕಥಾಸಾಹಿತ್ಯ ಸಂದರ್ಭದಲ್ಲಿ ಕುವೆಂಪು, ಮಾಸ್ತಿಯವರಂತೆ ಈ ಪ್ರಕಾರದಲ್ಲಿ ಹೆಚ್ಚು ಕೃಷಿಮಾಡಿದ್ದಾರೆ. ನೇರ ನಡೆನುಡಿಯ ದಿಟ್ಟನಿಲುವಿನ ಪ್ರೊ. ದೇಜಗೌರವರ ಬರವಣಿಗೆಯಲ್ಲಿ ಸಮನ್ವಯ ನಿಲುವುಗಳ ಜೊತೆಗೆ ಪ್ರಗತಿಪರ, ಬಂಡಾಯ ಪ್ರವೃತ್ತಿಯನ್ನು ಪ್ರಧಾನ ಅಂಶವಾಗಿ ಕಾಣುವ ಅಂಶವಾಗಿದೆ. ವಿಶ್ವಕವಿ ಕುವೆಂಪುರವರು ಮಲೆನಾಡಿನ ದಟ್ಟ ಬದುಕನ್ನು ತಮ್ಮ ಬರಹದಲ್ಲಿ ಚಿತ್ರಿಸಿರುವಂತೆ ಪ್ರೊ. ದೇಜಗೌರವರು ಬಯಲುಸೀಮೆ ಬದುಕನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಬಯಲುಸೀಮೆ ಜನರ ಬದುಕಿನ ನೋವು–ನಲಿವು, ದುಃಖ–ದುಮ್ಮಾನ, ಅಸೂಯೆ–ಸಣ್ಣತನ, ಪ್ರೀತಿ–ಪ್ರೇಮ ಅದರಲ್ಲೂ ರಾಮನಗರಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಹೊಲಗದ್ದೆ, ತೋಟ, ತೆವರಿ–ತಿಟ್ಟು, ದನದಕೊಟ್ಟಿಗೆ, ಬಡತನ, ಗ್ರಾಮೀಣ ಬದುಕು ಅಪಾರ ಅನುಭವದ ರಾಶಿಯೊಂದಿಗೆ ದೇಜಗೌರವರು ಆ ಜನರ ಬದುಕಿನ ಓರೆಕೋರೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ. ಕಾದಂಬರಿಯಲ್ಲಿ ವಿಶ್ವವಿದ್ಯಾನಿಲಯಗಳಲ್ಲಿ ನಡೆಯುವ ಅನಾಚಾರಗಳನ್ನು ಕಟುವಾಗಿ ಟೀಕಿಸಿದ್ದಾರೆ. ರವಿ ಕಾಣದ್ದನ್ನು ಕವಿ ಕಂಡ ಎಂಬಂತೆ ಆ ಎಲ್ಲ ಬದುಕಿನ ಎಳೆಎಳೆಯನ್ನು ದೇಜಗೌ ತಮ್ಮ ಕಥಾಸಾಹಿತ್ಯದಲ್ಲಿ ಬಿಡಿಸಿತೋರಿಸಿದ್ದಾರೆ.

ಪ್ರೊ. ದೇಜಗೌ ಅವರ ವಿಫುಲವಾದ ಕನ್ನಡ ಸಂಪತ್ತು ಕನ್ನಡ ಸಾರಸ್ವತಲೋಕಕ್ಕೆ ಕೊಟ್ಟ ದೊಡ್ಡ ಕೊಡುಗೆಯಾಗಿದೆ. ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲು ಕೆಲಸ ಮಾಡಿರುವ ಕನ್ನಡದ ಬಹುದೊಡ್ಡ ದೈತ್ಯ ಪ್ರತಿಭೆ. ವಸಾಹತುಶಾಹಿ ಮತ್ತು ಜನತಂತ್ರ ಪ್ರಭುತ್ವಗಳೆರಡನ್ನು ಕಂಡಿರುವ ದೇಜಗೌ ಗ್ರಾಮಜೀವನದ ದಟ್ಟ ಅನುಭವಗಳೊಂದಿಗೆ ಬೆಳೆದವರು ಆಗಿದ್ದಾರೆ.

ನಿಗೂಢ ಶಕ್ತಿಯ ಅಂತರಂಗದ ಅಭೀಪ್ಸೆಗಳು ಅನಂತ ಅದು ತನ್ನ ಕಾರ್ಯಸಾಧನೆಗಾಗಿ ರಚಿಸುವ ವ್ಯೂಹ ವಿಸ್ಮಯ ಹುಟ್ಟಿಸುತ್ತದೆ. ತನ್ನ ಅಂತರಂಗದ ಅಭಿವ್ಯಕ್ತಿಗೆ ಆ ನಿಗೂಢಶಕ್ತಿ ಮನುಷ್ಯನನ್ನು ನಿಯೋಜಿಸಿ ಅವನನ್ನು ಸಾಧನವಾಗಿ ಬಳಸಿಕೊಳ್ಳುತ್ತಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ನಾಡುನುಡಿಯ

ವಿಶ್ವಮಾನವತೆಯ ಹೊಸ ಆವಿಷ್ಕಾರಕ್ಕಾಗಿ ಅದು ಇಬ್ಬರು ಮಹಾನ್ ವ್ಯಕ್ತಿಗಳು ಹೊಯ್ಕೈಯಾಗಿ ನಿಯೋಜಿಸಿತು. ಒಂದು ಶಕ್ತಿ ಮಲೆನಾಡಿನ ನಿಸರ್ಗ-ಸೌಂದರ್ಯದ ರಮಣೀಯತೆಯಲ್ಲಿ ಜನಿಸಿದರೆ, ಮತ್ತೊಂದು ಶಕ್ತಿ ಬಯಲು ನಾಡಿನ ಬಡತನದ ಬೇಗುದಿಯ ಗುಡಿಸಲಿನಲ್ಲಿ ಜನಿಸಿತು. ಅಂಥ ಎರಡು ಮಹಾನ್ ಚೇತನಗಳೇ ಕುವೆಂಪು ಮತ್ತು ದೇಜಗೌ. ರಾಷ್ಟ್ರಕವಿ ಕುವೆಂಪು ಅವರು ಸಾಹಿತ್ಯದ ಮುಖಾಂತರ ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಹೆಸರಾದರೆ ದೇಜಗೌ ಸಾಹಿತಿಯಾಗಿ ಆಡಳಿತಗಾರರಾಗಿ, ಸಂಘಟಕರಾಗಿ, ಚಳವಳಿಗಾರರಾಗಿ ಇನ್ನು ಮುಂತಾದ ನಾನಾ ಮುಖಗಳಲ್ಲಿ ಕೆಲಸ ನಿರ್ವಹಿಸಿ ತಮ್ಮದೇ ಆದ ಕೊಡುಗೆಯನ್ನು ಈ ನಾಡುನುಡಿಗೆ ಕೊಟ್ಟಿದ್ದಾರೆ. ಇಂದು ಕನ್ನಡದ ಜೊತೆಯಲ್ಲೇ ದೇಜಗೌ ಎಂಬ ಮೂರಕ್ಷರ ಬೆರೆತುಕೊಂಡಿದೆ.

ನಮ್ಮ ನಾಡಿನ ಬಹುಶ್ರುತ ವಿದ್ವಾಂಸರಲ್ಲಿ ಒಬ್ಬರಾಗಿರುವ ದೇಜಗೌ ಅವರು ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಾಗಿ ಸರ್ವತೋಮುಖ ಬೆಳವಣಿಗೆಗಾಗಿ ತನುಮನ ಧನಗಳನ್ನು ಅರ್ಪಿಸಿಕೊಂಡಿರುವಂಥ ವ್ಯಕ್ತಿ. ಇಂದು ಕನ್ನಡಿಗರಿಗೆ ದೇಜಗೌ ಎಂಬ ಮೂರಕ್ಷರಗಳಿಂದ ಚಿರಪರಿಚಿತರಾಗಿದ್ದಾರೆ. ಇವರ ಪೂರ್ಣ ಹೆಸರು ದೇ.ಜವರೇಗೌಡ. ಇವರ ಜನನ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ತಾಯಿಯ ತವರಾದ ಮುದಿಗೆರೆಯಲ್ಲಿ ಜುಲೈ ೬, ೧೯೧೮ರಂದು ಜನಿಸಿದರು. ಇವರ ಬಾಲ್ಯಜೀವನ ತಮ್ಮ ತಂದೆಯ ಊರಾದ ಚಕ್ಕೆರೆ ಎಂಬ ಕುಗ್ರಾಮದಲ್ಲಿ ಇದು ಚನ್ನಪಟ್ಟಣಕ್ಕೆ ಸುಮಾರು ನಾಲ್ಕೂವರೆ ಮೈಲುದೂರದಲ್ಲಿದೆ. ವಿದ್ಯೆಯ ಗಂಧವೇ ಇಲ್ಲದಿದ್ದ ಬಡಕುಟುಂಬದಲ್ಲಿ ಹುಟ್ಟಿದ ದೇಜಗೌ ಆಡಳಿತ, ಶಿಕ್ಷಣ. ಸಾಹಿತ್ಯ ಕ್ಷೇತ್ರಗಳಲ್ಲಿ ಅಪಾರವಾದ ಸೇವೆ ಸಲ್ಲಿಸಿದ್ದಾರೆ. ರಾಷ್ಟ್ರಕವಿ, ಮಹಾಕವಿ ಕುವೆಂಪು ಅವರ ಅಂತರಂಗ ಶಿಷ್ಯರಾಗಿ, ಅವಿಚ್ಛಿನ್ನ ಭಕ್ತನಾಗಿ, ಕನ್ನಡದ ಅಪ್ರತಿಮ ಹೋರಾಟಗಾರನಾಗಿ, ಖ್ಯಾತವಿದ್ಯಾಂಸರಾಗಿ, ಶಿಕ್ಷಣತಜ್ಞರಾಗಿ, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ನಾಡಿನ ಹಲವು ವಿಶ್ವವಿದ್ಯಾನಿಲಯಗಳ ವತಿಯಿಂದ ಗೌರವ ಡಾಕ್ಟರೇಟ್ ಪುರಸ್ಕೃತರಾಗಿ, ಸಾಹಿತ್ಯ ಶಿಕ್ಷಣ ಮತ್ತು ಸಂಶೋಧನ ಕ್ಷೇತ್ರಗಳಲ್ಲಿನ ಹಲವಾರು ಪ್ರಶಸ್ತಿಗಳಿಗೆ ಪಾತ್ರರಾಗಿ, ಮುನ್ನೂರಕ್ಕು ಹೆಚ್ಚು ಮೌಲಿಕ ಗ್ರಂಥಗಳ ಕರ್ತೃ ಮಾತ್ರವಾಗಿಯಲ್ಲದೆ, ಮಹಾ ಅನುವಾದಕನಾಗಿ, ಜಾನಪದದಂಥ ನಿರ್ಲಕ್ಷಿತ ವಿಷಯಕ್ಕೆ ವಿಶ್ವವಿದ್ಯಾನಿಲಯಗಳಲ್ಲಿ ಶೈಕ್ಷಣಿಕ ಸ್ಥಾನಮಾನಗಳು ದೊರೆಯುವಂತೆ ಮಾಡಿದ ಮಹಾಮೇಧಾವಿಯಾಗಿ, ದೇಶ-ವಿದೇಶಗಳಲ್ಲಿ ಕರ್ನಾಟಕದ ಸಾಂಸ್ಕೃತಿಕ ಸಾಹಿತ್ಯಿಕ ರಾಯಭಾರಿಯಾಗಿ,

ಸಂಘಸಂಸ್ಥೆಗಳ ನಿರ್ಮಾಪಕನಾಗಿ ಅಪ್ಪಟ ಗಾಂಧೀವಾದಿಯಾಗಿ ಅವರ ತತ್ವ ಮತ್ತು ಸಿದ್ಧಾಂತಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡವರು. ಬಹುಮುಖ ಸಾಧನೆಗಳ ಕೇಂದ್ರಬಿಂದು ಪ್ರೊ. ದೇಜಗೌ ಕಥೆ, ಕಾದಂಬರಿ, ವಿಮರ್ಶೆ, ಸಂಶೋಧನೆ ಅನುವಾದ, ಆತ್ಮಕಥೆ, ಕಾವ್ಯ, ಚುಟುಕ, ವಚನ, ಸೂಕ್ತಿ, ಪ್ರಬಂಧ, ಅಂಕಣಬರಹಗಳು, ಕುವೆಂಪು ಕುರಿತ ಸಾಹಿತ್ಯ, ಮಕ್ಕಳ ಸಾಹಿತ್ಯ ಹೀಗೆ ಸಾಹಿತ್ಯದ ಸರ್ವಪ್ರಕಾರಗಳಲ್ಲೂ ಅಗಾಧ ಸಾಧನೆಯನ್ನು ಮಾಡಿದ್ದಾರೆ. ದೇಜಗೌ ಅವರು ತಮ್ಮ 'ಆತ್ಮಕಥೆ'ಯನ್ನು 'ಹೋರಾಟದ ಬದುಕು' ಎಂದೇ ಕರೆದಿದ್ದಾರೆ. ಬಾಲ್ಯ ವಿದ್ಯಾಭ್ಯಾಸ ಮತ್ತು ವೃತ್ತಿಯಲ್ಲಿನ ನೆಲೆಗಾಣುವಿಕೆಯ ಹೋರಾಟವನ್ನು, 'ವೈಯಕ್ತಿಕ ಹೋರಾಟ'ವೆಂದು ಪರಿಗಣಿಸಿದರೆ ನಂತರ ಮಾಡಿದ, ಮಾಡುತ್ತಿರುವ ಹೋರಾಟವನ್ನು 'ಕನ್ನಡ ಬಗೆಗಿನ ಹೋರಾಟ'ವೆಂದೇ ಬಣ್ಣಿಸಬಹುದು. ಇಂದು ಕೂಡ ಅವರು ಕನ್ನಡ ವಿರೋಧಿಗಳಿಗೆ 'ಸಿಂಹಸ್ವಪ್ನ'ವೇ ಆಗಿದ್ದಾರೆ.

ಸಾಹಿತ್ಯದ ಜೊತೆಗೆ ಆಡಳಿತ, ಸಂಘಸಂಸ್ಥೆಗಳ ಸ್ಥಾಪನೆ ಮಾಡಿದ ಕೀರ್ತಿ ದೇಜಗೌರವರಿಗೆ ಸಲ್ಲುತ್ತದೆ. 'ಕನ್ನಡ ಅಧ್ಯಯನ ಸಂಸ್ಥೆ' ಅವರು ಇಂಥ ಹೋರಾಟದ ಮೈತ್ರಿ ಸಾಧನೆಯ ಹಾಗೂ ದೂರದೃಷ್ಟಿಯ ಅಪೂರ್ವ ನಿದರ್ಶನವೇ ಆಗಿದೆ. ಭಾಷಾವಿಜ್ಞಾನ, ಜಾನಪದ, ಭಾಷಾಂತರ, ಶಾಸನ, ವಿಶ್ವಕೋಶ, ಹರಿದಾಸಸಾಹಿತ್ಯ, ಸಂಪಾದನೆ ಮೊದಲಾದ ಎಲ್ಲಾ ಅಧ್ಯಯನಕ್ಷೇತ್ರಗಳೂ ಒಂದೇ ಛಾವಣಿಯ ಅಡಿಯಲ್ಲಿ ಬರುವಂತೆ ಮಾಡಿದರು. ಯೋಜನೆಗಳನ್ನು ರೂಪಿಸಿ ಅವು ಕಾರ್ಯಗತವಾಗುವಂತೆ ಮಾಡಿದರು. ಆಯಾ ಕ್ಷೇತ್ರದಲ್ಲಿನ ತಜ್ಞರನ್ನು ರಾಜ್ಯದ ಮೂಲೆ ಮೂಲೆಗಳಿಂದ ಹಿಡಿದು ತಂದು ತೊಡಗಿಸಿದ ಹಿರಿಮೆಯೂ ಅವರದು. ಸರ್ಕಾರದಲ್ಲಿ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ 'ವಿಶ್ವಕೋಶ'ದ ಯೋಜನೆಯನ್ನು ಅನುಷ್ಠಾನಕ್ಕೆ ತಂದ ಕೀರ್ತಿ ಇವರಿಗೆ ಸಲ್ಲುತ್ತದೆ. ಕನ್ನಡ ಮಾಧ್ಯಮದ ಪಠ್ಯ-ಸಂದರ್ಭ ಗ್ರಂಥಗಳು ನೂರಾರು ಸಂಖ್ಯೆಯಲ್ಲಿ ಲಭ್ಯವಾಗಲು ಮಾಡಿದರು. ಜಾನಪದ ವಸ್ತು ಸಂಗ್ರಹಾಲಯ ಸ್ಥಾಪಿಸಿದರು. ಜಾನಪದ ಅಧ್ಯಯನವನ್ನು ಶೈಕ್ಷಣಿಕ ವಿಷಯವನ್ನಾಗಿ ಮಾಡಿ ಮೊದಲಿಗೆ ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನೆಗಳಿಗೆ ತೊಡಗಿಸಿಕೊಂಡರು. ಅವರು ಇದುವರೆವಿಗೂ ರಚಿಸಿದ ಗ್ರಂಥಗಳು, ಮಾಡಿದ ಅನುವಾದಗಳು, ಗುಣ ಮತ್ತು ಗಾತ್ರಗಳ ದೃಷ್ಟಿಯಿಂದ ಮಹತ್ವದ್ದಾಗಿದ್ದುದಲ್ಲದೆ, ಕಿರಿಯರಿಗೆ ಮಾರ್ಗದರ್ಶನ ವಾಗುವಂತೆಯೂ ಮಾಡಿವೆ.

ದೇಜಗೌ ಅವರು ಕುಲಪತಿಗಳಾಗಿದ್ದ ಸಂದರ್ಭದಲ್ಲಿ ಹಲವಾರು ವಿಕ್ರಮಗಳನ್ನು ಮೆರೆದರು. ವಿಶ್ವವಿದ್ಯಾನಿಲಯದ ಆಡಳಿತದಲ್ಲಿ, ಶಿಕ್ಷಣದಲ್ಲಿ ಕನ್ನಡಕ್ಕೆ ಅರ್ಥಪೂರ್ಣಸ್ಥಾನಮಾನಗಳು ಲಭಿಸಿದವು. ಅವರ ಆಡಳಿತ ಮತ್ತು ಶೈಕ್ಷಣಿಕ ನೆಲೆಗಳಲ್ಲಿ ಕನ್ನಡವನ್ನು ವಿವಿಧನೆಲೆಗಳಲ್ಲಿ ಕಟ್ಟಿದರು. ಅವರ ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಚಿಂತನೆಗಳು ಅವರು ಪ್ರಕಟಪಡಿಸಿದ 'ಕುಲಪತಿಯ ಭಾಷಣಗಳಿಗೆ' ಸಾಕ್ಷಿಯಾಗಿವೆ. ವೃತ್ತಿಯಿಂದ ನಿವೃತ್ತರಾದ ಮೇಲೆಯೂ ದೇಜಗೌ ಅವರು ಸ್ಥಾಪಿಸಿದ ಸಂಘಸಂಸ್ಥೆಗಳಲ್ಲಿ ಅಪಾರ 'ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್' 'ಶ್ರೀ ಕುವೆಂಪು ವಿದ್ಯಾಪರಿಷತ್ತು' ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ, ಭಾರತೀಯ ಸ್ಥಳನಾಮ ಪರಿಷತ್ತು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಹೀಗೆ ಅನೇಕ ಸಂಸ್ಥೆಗಳನ್ನು ಬೆಳೆಸಿದ ಹಿರಿಮೆ ಅವರಿಗೆ ಸಲ್ಲುತ್ತದೆ.

ಕುವೆಂಪು ಸಾಹಿತ್ಯ, ಜಾನಪದ, ಸಂಶೋಧನೆ, ವಿಮರ್ಶೆ, ಅನುವಾದ, ಪ್ರವಾಸ ಸಾಹಿತ್ಯ ಮತ್ತು ಜೀವನಚರಿತ್ರೆ, ಕಥೆಗಳು, ಕಾದಂಬರಿ, ನಾಟಕ, ಕಾವ್ಯ ಅವರ ಪ್ರಮುಖ ಆಸಕ್ತಿಯ ಕ್ಷೇತ್ರಗಳು. ಈ ಎಲ್ಲಾ ಕ್ಷೇತ್ರಗಳಲ್ಲಿಯೂ ಎದ್ದು ಕಾಣುವಂಥ ಹೆಗ್ಗುರುತುಗಳನ್ನು ಅವರು ಮೂಡಿಸಿದ್ದಾರೆ. ರಾಷ್ಟ್ರಕವಿ ಕುವೆಂಪು ಸಾಹಿತ್ಯವನ್ನು ಕುರಿತಂತೆ ನಾಲ್ಕು ಸಾವಿರ ಪ್ರತಿಗಳಲ್ಲಿ ರಚಿಸಿದ ಕೀರ್ತಿ ಇವರಿಗಿದೆ. 'ರಾಮಾಯಣದರ್ಶನಂ' ವಚನ ಚಂದ್ರಿಕೆ ಆ ಕಾವ್ಯದ ಅರಿವಿಗೆ ಪಂಡಿತ ಪಾಮರರಿಗೆಲ್ಲ ನೆರವಾಗುವಂಥ ಕೃತಿಯಾಗಿದೆ. ಈ ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ಸರಿಯಾದ ದಿಕ್ಕು-ದೆಸೆಗಳನ್ನು ತೋರಿದ್ದಲ್ಲದೆ, 'ಜಾನಪದ ಅಧ್ಯಯನ' 'ಜಾನಪದ ವಾಹಿನಿ' ಮತ್ತು 'ಜನಪದಸೌಂದರ್ಯ' 'ಜಾನಪದ ಮಹಾಸಂಪುಟ-ದಂಥ ಮೂಲಭೂತ ಗ್ರಂಥಗಳನ್ನು ರಚಿಸಿ, ಈ ಅಧ್ಯಯನ ಕ್ಷೇತ್ರದ ಹಿರಿಮೆ-ಗರಿಮೆಗಳನ್ನು ಸಾರಿ ಹೇಳಿದ್ದಾರೆ. ಅದು ಸಾಗಬೇಕಾಗಿರುವ ಮಹಾಮಾರ್ಗಗಳನ್ನು ತೆರೆದು ತೋರಿದ್ದಾರೆ.

ಸಂಶೋಧನೆ ಮತ್ತು ವಿಮರ್ಶೆಯ ಕ್ಷೇತ್ರಗಳಿಗೆ ದೇಜಗೌ ಅವರು ನೀಡಿರುವ ಕೊಡುಗೆಯೂ ಅಪಾರವಾದುದು, ವೈವಿಧ್ಯಪೂರ್ಣವಾದುದು, ಮೌಲಿಕವಾದುದಾಗಿದೆ. ವ್ಯಾಪಕವಾದ ಅಧ್ಯಯನ ಆಳವಾದ ವಿಮರ್ಶಕ ದೃಷ್ಟಿ ಮತ್ತು ಮೌಲಿಕ ಚಿಂತನೆಗಳಿಂದ ಕೂಡಿ ವಿದ್ವಾಂಸರ, ಸಂಶೋಧಕರ ಗಮನವನ್ನು ಸೆಳೆದಿದೆ. ನಂಜುಂಡಕವಿ ಕುರಿತ ಕೃತಿ, ಕುಮಾರವ್ಯಾಸ ಭಾರತದ ಬಗೆಗಿನ ಅವರ ಸಾಂಸ್ಕೃತಿಕ ಅಧ್ಯಯನ ಎಲ್ಲ ಅಧ್ಯಯನಗಳಿಗೂ ಮಾರ್ಗದರ್ಶನವಾಗಿ ನಿಲ್ಲಬಲ್ಲಂಥ ಕೃತಿಯೇ

ಆಗಿದೆ. 'ಗದ್ಯಶೈಲಿ' ಕೃತಿಯಂತೂ ಕನ್ನಡ ಗದ್ಯ ಪಡೆದುಕೊಂಡಿರುವ ವಿವಿಧ ಆಯಾಮಗಳನ್ನು ಅನಾವರಣಗೊಳಿಸಿರುವಂಥ ಕೃತಿ, 'ಸ್ಥಳನಾಮ ವ್ಯಾಸಂಗ', ಜಾನಪದ, ಭಾಷಾ ವಿಜ್ಞಾನಕ್ಕೆ ಸಂಬಂಧಪಟ್ಟ ಬರಹಗಳು ಒಳ್ಳೆಯ ಕೃತಿಗಳಾಗಿವೆ.

ಭಾಷಾಂತರ ಕ್ಷೇತ್ರ ದೇಜಗೌ ಅವರ ಪ್ರೀತಿಯ ಕ್ಷೇತ್ರಗಳಲ್ಲೊಂದು. ಯಾರೂ ಮುಟ್ಟಲೂ ಹೆದರುವಂಥ ಬೃಹತ್ತಾದ, ಮಹತ್ತರವಾದ ಗ್ರಂಥಗಳು ದೇಜಗೌರವರಿಂದ ಕನ್ನಡಕ್ಕೆ ಲಭ್ಯವಾದದ್ದು ಕನ್ನಡಿಗರ ಪುಣ್ಯವೆಂದೇ ಹೇಳಬೇಕು. ಟಾಲ್‌ಸ್ಟಾಯ್ ಅವರ 'ಪುನರುತ್ಥಾನ' 'ಯುದ್ಧ ಮತ್ತು ಶಾಂತಿ' ಮತ್ತು 'ಅನ್ನಾಕರಿನೀನಾ'ದಂಥ ಕೃತಿಗಳು. ಜೀನ್ ಆಸ್ಟಿನ್ ಅವರ 'ಹಮ್ಮು-ಬಿಮ್ಮು' ಬಿಸ್ವಿನ್ ಲಾರೆನ್ಸ್‌ನ ಅಕ್ಬರ್‌ನಂಥ ಮಹತ್ವದ ಕೃತಿಗಳನ್ನೆಲ್ಲ ಕನ್ನಡಕ್ಕೆ ಭಾಷಾಂತರಿಸಿದರು. ಇವರು ಮಾಡಿದ ಅನೇಕ ಅನುವಾದಗಳು ಸೃಜನಶೀಲ ಅನುವಾದದ ನೆಲೆಯಲ್ಲಿದೆ. ಕಾದಂಬರಿ ಜೀವನಚರಿತ್ರೆ, ನಾಟಕ, ಜಾನಪದ ಇವೇ ಮೊದಲಾದ ೬೦೦೦ ಪ್ರತಿಗಳನ್ನು ಮೀರುತ್ತವೆ. ವಾಸ್ತವವಾಗಿ ಭಾಷಾಂತರ ಅಧ್ಯಯನ ಕ್ಷೇತ್ರ ಕನಾಟಕದಲ್ಲಿ ವಿಶ್ವವಿದ್ಯಾನಿಲಯದ ಮಟ್ಟದ ಅಧ್ಯಯನ ವಿಷಯ ವಾಗಲೂ ದೇಜಗೌ ಅವರೇ ಮೂಲತಃ ಕಾರಣರು.

ದೇಜಗೌ ಕುಲಪತಿಯಾಗಿದ್ದ ಮತ್ತು ವಿಶ್ರಾಂತ ಜೀವನದಲ್ಲೂ ಜಗತ್ತಿನ ನಾನಾ ದೇಶಗಳಲ್ಲಿ ಸಂಚರಿಸಿ ಕನ್ನಡಕ್ಕೆ ಗಟ್ಟಿಯಾದ ಪ್ರವಾಸ ಕಥನಗಳನ್ನು ಕೊಟ್ಟಿದ್ದಾರೆ. ವಿದೇಶಗಳಲ್ಲಿ ನಾಲ್ಕುವಾರ, ವಿಸ್ಮಯಗಳ ನಾಡಿನಲ್ಲಿ, 'ಆಫ್ರಿಕಾಯಾತ್ರೆ' 'ಯೇಸು ವಿಭೀಷಣರ ನಾಡಿನಲ್ಲಿ' 'ಪ್ರವಾಸಸಂಭ್ರಮ' ಹೀಗೆ ಸುಮಾರು ಹತ್ತಕ್ಕೂ ಹೆಚ್ಚು ಪ್ರವಾಸಕಥನಗಳನ್ನು ರಚಿಸಿದ್ದಾರೆ. ಸಾಹಿತ್ಯಿಕ-ಸಾಂಸ್ಕೃತಿಕ, ಸಾಮಾಜಿಕ ಮಹತ್ವದ ಸಂಗತಿಗಳತ್ತ, ಅಧ್ಯಯನ ಅನುಭವಗಳ ಗಟ್ಟಿ ಈ ಪ್ರವಾಸ ಕಥನಗಳಲ್ಲಿವೆ. ನಮ್ಮ ನಾಡಿನ ಹಿತದೃಷ್ಟಿಯಿಂದ ಗಮನಾರ್ಹವಾದ ಸಂಗತಿಗಳತ್ತ ಒತ್ತುಕೊಟ್ಟೇ ಅವರು ವಿವಿಧ ದೇಶಗಳ ಹಿರಿಮೆ-ಗರಿಮೆ-ಸಾಧನೆ-ವೈಶಿಷ್ಟ್ಯಗಳನ್ನು ಗುರುತಿಸಿದ್ದಾರೆ. ಅವು ಕೇವಲ ವರದಿಗಳಾಗದೆ 'ಪ್ರವಾಸಿ-ಮಾಹಿತಿ'ಗಳ ಸಂಕಲನವಾಗಿ ಮೂಡಿಬಂದಿವೆ.

ಜೀವನಚರಿತ್ರೆಗಳ ಕ್ಷೇತ್ರಕ್ಕೆ ದೇಜಗೌ ಅವರ ಕೊಡುಗೆ ಅತ್ಯಂತ ಮಹತ್ವಪೂರ್ಣವಾದುದು, ಮೌಲಿಕವಾದುದು ಹಾಗೂ ವೈವಿಧ್ಯಮಯವಾದು ದಾಗಿದೆ. ರಾಷ್ಟ್ರಕವಿ ಕುವೆಂಪು, ತೀನಂಶ್ರೀ, ನಿತ್ಯಸಚಿವ 'ಕರ್ನಾಟಕ ರುವಾರೀ ಲೋಕ ನಾಯಕ' ಕ್ರಾಂತಿಕಾರಿ ಡಾ. ಅಂಬೇಡ್ಕರ್, ಶ್ರೀನಾರಾಯಣಗುರು ಒಟ್ಟು ಮೂವತ್ತೈದು ಜೀವನ ಚರಿತ್ರೆಗಳನ್ನು ಯಾವುದೇ ಪೂರ್ವಾನುಗ್ರಹಗಳಿಲ್ಲದೆ, ಈ

ಎಲ್ಲ ಆರಾಧ್ಯ ವ್ಯಕ್ತಿಗಳ ಸಾಧನೆಗಳನ್ನು ವಸ್ತು ನಿಷ್ಠವಾಗಿ ಒರೆಹಚ್ಚಿ ಆತ್ಮೀಯ ಶೈಲಿಯಲ್ಲಿ ನಿರೂಪಿಸುವುದು ಈ ಎಲ್ಲ ಕೃತಿಗಳಲ್ಲಿ ಕಂಡು ಬರುವ ವೈಶಿಷ್ಟ್ಯವಾಗಿದೆ. ಜೀವನ ಚರಿತ್ರೆಗಳನ್ನು ಬರೆಯುವಾಗ ಅವರು ವಹಿಸುವ ಆಸಕ್ತಿ, ಕಲೆಹಾಕುವ ಅಗಾಧ ಸಾಮಗ್ರಿ ಅವನ್ನು ವಸ್ತುನಿಷ್ಠವಾಗಿ ಬೆಳೆಸಿಕೊಳ್ಳುವಲ್ಲಿ ಅವರು ತೋರುವ ಜಾಣ್ಮೆ ಹಾಗೂ ಔಚಿತ್ಯಪ್ರಜ್ಞೆ ನಮ್ಮನ್ನು ಬೆರಗುಗೊಳಿಸುತ್ತದೆ. 'ಆತ್ಮಕಥೆ'ಯ ವೈವಿಧ್ಯಮಯ ಪ್ರಸಾರಕ್ಕೂ ದೇಜಗೌ ಕೊಡುಗೆಯನ್ನು ಇತ್ತಿದ್ದಾರೆ. 'ಹೋರಾಟದ ನೆನೆಪು' 'ನೆನಪಿನಬುತ್ತಿ' 'ನನ್ನ ಉಪವಾಸದ ಕಥೆ'– ತಮ್ಮ ವ್ಯಕ್ತಿತ್ವದ ಗುಣ–ದೋಷ–ಲೋಪ ದೌರ್ಬಲ್ಯ, ಸವಾಲು–ಸಾಧನೆಗಳನ್ನು ಅವರು ವಿಶೇಷಣಾತ್ಮಕವಾಗಿ ವಿವರಿಸಿದ್ದಾರೆ. ಪ್ರಬಂಧ, ಹರಟೆ, ಐತಿಹಾಸಿಕ ಕಾದಂಬರಿಗಳಾದ 'ಕಡುಗಲಿ ಕುಮಾರರಾಯ; 'ಬೆಂಗಳೂರು ಕೆಂಪೇಗೌಡ,' 'ಮಕ್ಕಳಸಾಹಿತ್ಯ, ಶೈಕ್ಷಣಿಕಸಾಹಿತ್ಯ, ಸಮೃದ್ಧವಾಗಿ ಕೃತಿಗಳನ್ನು ರಚಿಸಿದ್ದಾರೆ. ಹೀಗೆ ಸಾಹಿತ್ಯದ ಸರ್ವಪ್ರಕಾರದಲ್ಲೂ ತಮ್ಮದೇ ಆದ ಛಾಪು ಮೂಡಿಸಿದ ದೇಜಗೌರವರು ಅಪಾರ ವಿದ್ವತ್ತಿನ ಪ್ರಕರವಾದ ಅನುಭವದೊಂದಿಗೆ ಕಳೆದ ಹತ್ತಾರು ವರ್ಷಗಳಿಂದ ಸೃಜನಶೀಲ ಬರವಣಿಗೆಯನ್ನು ಮಾಡಿದ್ದಾರೆ. ಕಥೆ ಕಾದಂಬರಿ, ನಾಟಕಗಳು ದಟ್ಟವಾದ ಸಾಮಾಜಿಕ ಪ್ರಜ್ಞೆಯೊಂದಿಗೆ ಹುಟ್ಟಿಕೊಂಡಿವೆ.

ಪ್ರೊ. ದೇಜಗೌರವರು ಕಥಾಸಾಹಿತ್ಯಕ್ಕೆ ಮೌಲಿಕವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ಅವರ ಸಾಹಿತ್ಯದ ಮೇಲೆ ಹಲವಾರು ಸಂಶೋಧನಾ ಪ್ರಬಂಧಗಳು ಬರೆದಿದ್ದರೂ ಅವರ ಕಥಾ ಸಾಹಿತ್ಯವನ್ನು ಚರ್ಚಿಸದಿರುವುದರಿಂದ ಈ ನನ್ನ ಪ್ರಬಂಧದ ವಸ್ತುವಾಗಿ ಆಯ್ಕೆಮಾಡಿಕೊಂಡು ಚರ್ಚೆ ನಡೆಸಿದ್ದೇನೆ. ಅವರ ಕಥಾ ಸಾಹಿತ್ಯದಲ್ಲಿ ಭಾವಸಮೃದ್ಧಿ, ವಿಷಯಸಮೃದ್ಧಿ, ಸೂಕ್ಷ್ಮದೃಷ್ಟಿಯ ವಾಸ್ತವ ಶ್ರೀಮಂತ ಪ್ರಜ್ಞೆಯ, ವೈವಿಧ್ಯಮಯವಾದ ಜೀವನಾನುಭವವಿದೆ. ಗ್ರಾಮನೆಲೆಯ ಕಷ್ಟಗಳನ್ನು ಹಸಿಹಸಿಯಾಗಿ ಕಥೆಗಳಲ್ಲಿ ದೇಜಗೌ ಚಿತ್ರಿಸುತ್ತಾರೆ. ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಹೀಗೆ ಹಲವಾರು ನೆಲೆಗಳಲ್ಲಿ ಅವರ ಕಥಾ ಸಾಹಿತ್ಯವನ್ನು ಸಂಶೋಧನೆಗೆ ಒಳಪಡಿಸಿ ವಿವೇಚಿಸುವ, ಬೆಲೆಕಟ್ಟುವ ಕಾರ್ಯವನ್ನು ಈ ಪ್ರಬಂಧದಲ್ಲಿ ಮಾಡಲಾಗುವುದು.

# ಅಧ್ಯಾಯ – ೨

# ಕನ್ನಡ ಕಥಾ ಸಾಹಿತ್ಯ ಬೆಳೆದು ಬಂದ ಬಗ್ಗೆ

ಕಥೆ ಹೇಳುವುದಾಗಲಿ, ಕೇಳುವುದಾಗಲಿ ಬಹಳ ಪ್ರಾಚೀನವಾದುದಾಗಿದೆ. ಬಹುಶಃ ಮಾನವ ಮಾತನಾಡುವುದನ್ನು ಕಲಿತಾಗಲೇ ಕಥೆಯ ಅಂಕುರಾರ್ಪಣವೂ ಆಗಿರಬೇಕೆಂದು ತೋರುತ್ತದೆ. ಭಾರತದ ಮಟ್ಟಿಗೆ ಹೇಳುವುದಾದರೆ ಕಥೆ ಬಹು ಹಿಂದಿನಿಂದಲೂ ಇಲ್ಲಿ ಅಸ್ಥಿತ್ವದಲ್ಲಿರುವುದನ್ನು ನೋಡುತ್ತೇವೆ. ವೇದಗಳಲ್ಲಿ ಕಂಡುಬರುವ ಇಂದ್ರ, ವೃತ್ರಾಸುರರ ಕಥೆಗಳು, ಪೂರೂರವ, ಊರ್ವಶಿ ಮುಂತಾದವರ ಕಥೆಗಳು, ಐತರೇಯ ಬ್ರಾಹ್ಮಣದ ಹರಿಶ್ಚಂದ್ರನ ಕಥೆ, ಕಠೋಪನಿಷತ್ತಿನಲ್ಲಿರುವ 'ನಚೀಕೇತೋಪಾಖ್ಯಾನ' ಮೊದಲಾದವು ಸೊಗಸಾದ ಕಥೆಗಳಾಗಿವೆ. ಬ್ರಾಹ್ಮಣ, ಉಪನಿಷತ್, ಪುರಾಣಗಳು, ರಾಮಾಯಣ, ಮಹಾಭಾರತ ಬೃಹತ್ಕಥಾ ಇವೇ ಮೊದಲಾದವುಗಳು ಅಪಾರ ಕಥಾ ಸಂಪತ್ತಿನಿಂದ ಕೂಡಿದವುಗಳಾಗಿವೆ. ಗೌತಮಬುದ್ಧ ಧರ್ಮಬೋಧನೆಯನ್ನು ಸುಲಭವಾಗಿ ಜನತೆಗೆ ಮುಟ್ಟಿಸಲು ಕಥೆಗಳನ್ನು ಆಶ್ರಯಿಸುತ್ತಾನೆ. ಇವು ಮುಂದೆ ಜಾತಕ ಕಥೆಗಳೆಂದು ಪ್ರಸಿದ್ಧವಾಗುತ್ತವೆ. ಜೈನರ ಅರವತ್ಮೂರು ಶಲಾಕಾಪುರುಷರ ಸುತ್ತ ಕಥೆಗಳು ಸಮೃದ್ಧವಾಗಿ ಹರಡಿವೆ. ಇಷ್ಟೇ ಅಲ್ಲದೆ ವಾಕ್ ಸಂಪ್ರದಾಯದಲ್ಲಿ ಹರಿದು ಬಂದಿರುವ ಕಥಾಪರಂಪರೆಯೊಂದನ್ನೇ ಜನಪದದಲ್ಲಿ ನೋಡಬಹುದಾಗಿದೆ. ಹೀಗೆ ನಮ್ಮಲ್ಲಿ ಕಥಾ ಕಣಜ ಬಹುಹಿಂದಿನಿಂದಲೂ ತುಂಬಾ ಶ್ರೀಮಂತವಾಗಿರುವುದನ್ನು ಕಾಣುತ್ತೇವೆ.

ಜಾತಿಧರ್ಮಗಳ ಭೇದಭಾವವಿಲ್ಲದೆ ವಿರಾಮವೇಳೆಯನ್ನು ಕಳೆಯಲು, ಕೆಲಸದ ಬೇಸರ, ಆಯಾಸಗಳನ್ನು ನಿವಾರಿಸಿಕೊಳ್ಳಲು ಕಿರಿಯರಿಗೆ ಹಿರಿಯರಿಗೆ ಎಲ್ಲರಿಗೂ ಕಥೆಗಳು ಅವಶ್ಯಕವಾದವು. ಇಂದಿನ ಮನರಂಜನಾ ಸವಲತ್ತುಗಳಿಲ್ಲದ ಹಿಂದಿನ ಕಾಲದ ಜನರಿಗೆ ಕಥೆಗಳೇ ಪ್ರಮುಖ ಮನರಂಜನಾ ಸಾಧನವಾಗಿದ್ದಂತೆ ತೋರುತ್ತದೆ. "ಉಪನಿಷತ್ತಿನ ಋಷಿಗಳು ಆಧ್ಯಾತ್ಮ ವಿದ್ಯಾಪ್ರಸಾರಕ್ಕೆ ಕಥಾಸಾಧನವನ್ನು ಬಳಸಿಕೊಂಡಂತೆ ಕನ್ನಡ ನಾಡಿನ ತಾಯಂದಿರು ಕಥೆಗಳ ಮೂಲಕ ತಮ್ಮ ಮಕ್ಕಳ ಮನಸ್ಸನ್ನು ಬೆಳೆಸಿ ತಿದ್ದುತ್ತಿದ್ದರು. ಸಮಸ್ಯೆಗಳನ್ನು ಪೃಥಕ್ಕರಿಸಿಬೇಕಾದಾಗ ತತ್ವದರ್ಶನ, ಕಲಾವಿಜ್ಞಾನಗಳನ್ನು ಬೋಧಿಸಬೇಕಾದಾಗ ಕಥೆಯ ಮನರಂಜಕ ಸಾಧನ ಕನ್ನಡಿಗರಿಗೆ ನೆರವಾಗುತ್ತಿತ್ತು. ಸಾಹಿತ್ಯ ಪ್ರಪಂಚದಲ್ಲಿ ಮಾತ್ರವೇ ಅಲ್ಲದೆ ದರ್ಶನ, ತತ್ವ, ವಿಜ್ಞಾನ ಪ್ರಪಂಚಗಳಲ್ಲಿಯೂ ಕಥನಕಲೆ ಬಹಳ

ಪ್ರಸಿದ್ಧಿಯಾಗಿದೆ. ಬೈಬಲ್, ಕುರಾನ್, ಉಪನಿಷತ್ತುಗಳಲ್ಲಿ ಇದರ ಉಪಯೋಗ ಕಂಡುಬಂದಿರುವುದಲ್ಲದೆ, ಪರ್ಶಿಯಾ, ಅರೇಬಿಯಾ ದೇಶಗಳ ಸೂಫಿ ತತ್ವಜ್ಞರು ಕಥೆಯ ಮೂಲಕವೇ ತಮ್ಮ ವಿಚಾರಗಳನ್ನು ಪ್ರತಿಪಾದಿಸುವ ಪರಿಪಾಠವನ್ನಿಟ್ಟು ಕೊಂಡಿದ್ದರು.[೧] ನಮ್ಮ ಹಳಗನ್ನಡ ಸಾಹಿತ್ಯದ ಹಲವು ಕೃತಿಗಳು ಕಥೆಗಳಿಗಾಗಿಯೇ ಮೀಸಲಾಗಿರುವುದನ್ನು ನೋಡುತ್ತೇವೆ. ದುರ್ವಿನೀತನು ಪೈಶಾಚಿ ಭಾಷೆಯಲ್ಲಿದ್ದ ಗುಣಾಢ್ಯನ 'ಬೃಹತ್ಕಥೆ'ಯನ್ನು ಕನ್ನಡಕ್ಕೆ ಅನುವಾದಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸದ್ಯಕ್ಕೆ ಉಪಲಬ್ಧವಿರುವ ಮೊಟ್ಟಮೊದಲ ಕನ್ನಡ ಕಥಾಸಂಗ್ರಹವೆಂದರೆ ಕ್ರಿ.ಶ. ಸುಮಾರು ೯೨೦ 'ವಡ್ಡಾರಾಧನೆ', ಇದರಲ್ಲಿ ಹತ್ತೊಂಬತ್ತು ಧಾರ್ಮಿಕ ಕಥೆಗಳಿವೆ. ಇದರ ನಂತರ ನಯಸೇನ 'ಧರ್ಮಾಮೃತ', ದುರ್ಗಸಿಂಹನ 'ಪಂಚತಂತ್ರ, ವೃತ್ತವಿಲಾಸನ 'ಧರ್ಮಪರೀಕ್ಷೆ ಮುಂತಾದ ಕಥಾಸಂಕಲನಗಳನ್ನು ಇಲ್ಲಿ ದಾಖಲಿಸಬಹುದು.

ಹೀಗಾಗಿ ನಮ್ಮ ಆಧುನಿಕ ಕಥಾಪ್ರಕಾರದ ಹುಟ್ಟನ್ನು ಪಾಶ್ಚಾತ್ಯ ದೇಶಗಳಲ್ಲಿ ಅರಸಬೇಕಾದುದೇನಿಲ್ಲ. ಆದರೆ ಇಂದು ನಾವು ಆಧುನಿಕ ಸಣ್ಣ ಕಥಾ ಪ್ರಕಾರದಲ್ಲಿ ನೋಡುವ ವೈವಿಧ್ಯಮಯವಾದ ಆಯಾಮಗಳ ಮೇಲೆ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವವನ್ನು ಅಲ್ಲಗಳೆಯಲಾಗುವುದಿಲ್ಲ. ಒಟ್ಟಿನಲ್ಲಿ ಈ ಸಂಬಂಧವಾಗಿ ಡಾ.ಗಿರಡ್ಡಿ ಗೋವಿಂದರಾಜ ಅವರು ವ್ಯಕ್ತಪಡಿಸುವ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದಾಗಿದೆ. "ಕನ್ನಡದಲ್ಲಿ ಹೊಸದಾಗಿ ಆರಂಭವಾದ ಸಣ್ಣಕತೆ ಪಶ್ಚಿಮದ ದೇಶಗಳಲ್ಲಿ ಆಗಲೇ ಸಿದ್ಧವಾಗಿದ್ದ ರೂಪದ ಪ್ರಭಾವದಿಂದಾಗಿಯೇ ನಮ್ಮಲ್ಲಿ ಬಂದಿತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಸಣ್ಣಕತೆ ನಮಗೆ ಹೊಸದಲ್ಲವೆಂದೂ 'ಕಥಾಸರಿತ್ಸಾಗರ', 'ಪಂಚತಂತ್ರ'ಗಳಂತಹ ಕಥಾಸಂಗ್ರಹಗಳು ನಮ್ಮಲ್ಲಿದ್ದವೆಂದೂ ವಾದಿಸುವ ಕೆಲವರು ಈಗಲೂ ಇದ್ದಾರೆ. ಆದರೆ ಇಂದಿನ ಸಣ್ಣಕತೆ ನಮ್ಮ ಪ್ರಾಚೀನ ಕಥಾಪರಂಪರೆಯ ಸಹಜ ಬೆಳವಣಿಗೆಯ ಫಲವಲ್ಲ. ಪಶ್ಚಿಮದ ಆಧುನಿಕ ಸಣ್ಣಕತೆಯ ಸಂಪರ್ಕದಲ್ಲಿ ನಾವು ಬಂದಿರದಿದ್ದರೆ ಈಗಿನ ರೂಪದ ಸಣ್ಣಕತೆ ನಮ್ಮಲ್ಲಿ ಹುಟ್ಟುತ್ತಿರಲಿಲ್ಲ ಎಂಬ ಅಂಶವನ್ನು ನಾವಿಲ್ಲಿ ಮರೆಯಬಾರದು, ಆದರೆ ಪಶ್ಚಿಮದ ಸಣ್ಣಕತೆ ನಮ್ಮಲ್ಲಿಗೆ ಬಂದಾಗ ಅದು ಅಲ್ಲಿಯ ಪೂರ್ಣ ಅನುಕರಣೆಯಾಗಿ ನಮ್ಮಲ್ಲಿ ಕತೆಗಳ ಒಂದು ಪರಂಪರೆಯೇ ಇರಲಿಲ್ಲವೆಂಬಂತೆ, ತೀರ ಹೊಸದಾಗಿಯೇ ಬರಲಿಲ್ಲವೆಂಬುದು ಕೂಡ ಅಷ್ಟೇ ಮುಖ್ಯವಾದ ಅಂಶವಾಗಿದೆ."[೨]

---

೧. ಅನಕೃ. ಸಾಹಿತ್ಯ ಮತ್ತು ಜೀವನ: ಶಾರದಾ ಪ್ರಕಟನಾಲಯ, ೧೯೬೧, ಪುಟ. ೮೮.

೨. ಸಂ. ಡಾ. ಜಿ.ಎಸ್.ಶಿವರುದ್ರಪ್ಪ: ಮಾಸ್ತಿಯವರ ಸಾಹಿತ್ಯ ಒಂದು ಅಧ್ಯಯನ: ಲೇಖನ: ಕನ್ನಡ ಕಥಾ ಪರಂಪರೆ ಮತ್ತು ಮಾಸ್ತಿ:ಲೇಖಕ –ಗಿರಡ್ಡಿ ಗೋವಿಂದರಾಜ, ಪುಟ. ೨೫, ೧೯೮೬

ಹೀಗೆ ಪಾಶ್ಚಾತ್ಯ ಕಥಾ ಸಾಹಿತ್ಯದ ಪ್ರಭಾವದಿಂದಾಗಿ ಭಾರತದಲ್ಲಿ ಕಾಣಿಸಿಕೊಂಡ ಆಧುನಿಕ ಕಥಾಪರಂಪರೆಗೆ ಮೊದಲು ಆಶ್ರಯ ನೀಡಿದ್ದು ಬಂಗಾಲಿ ಭಾಷೆ, ವಿಶ್ವಕವಿ ರವೀಂದ್ರರ ಪೋಷಣೆ ಇದಕ್ಕೆ ದೊರೆಯುತ್ತದೆ. ಅನಂತರ ಈ ಆಧುನಿಕ ಸಣ್ಣಕಥಾ ಪ್ರಕಾರವು ಭಾರತದ ಎಲ್ಲಾ ಭಾಷೆಗಳಲ್ಲೂ ಮೊದಲಾಗುತ್ತದೆ. ಹೊಸಗನ್ನಡ ಸಾಹಿತ್ಯದ ಆರಂಭದಲ್ಲಿ ಸಣ್ಣಕಥೆಗಳನ್ನು ರಚಿಸಿದವರಲ್ಲಿ ಪಂಜೆಮಂಗೇಶರಾಯರು, ಎಂ.ಎನ್.ಕಾಮತ್, ಕೆರೂರು ವಾಸುದೇವಾಚಾರ್ ಮೊದಲಾದವರು ಪ್ರಮುಖರಾಗಿದ್ದಾರೆ. ಪಂಜೆಯವರ ಕಥೆಗಳಲ್ಲಿ ಇಂಗ್ಲಿಷ್ ಹಾಗೂ ಬಂಗಾಳಿ ಕಥೆಗಳ ಪ್ರಭಾವ ಇರುವುದನ್ನು ಕಾಣುತ್ತೇವೆ. ಕೆರೂರು ವಾಸುದೇವಾಚಾರ್ಯರು ಮರಾಠಿಭಾಷೆಯ ಕಥೆಗಳಿಂದ ಪ್ರಭಾವಿತರಾಗಿದ್ದರೆ, ಎಂ.ಎನ್.ಕಾಮತ್ ಅವರು ಬಂಗಾಳಿ ಭಾಷೆಗಳ ಕಥೆಗಳಿಂದ ಪ್ರಭಾವಿತರಾಗಿದ್ದಾರೆ.

ಹೊಸಗನ್ನಡದಲ್ಲಿ ಸಣ್ಣಕಥಾ ಪ್ರಕಾರದ ಬೆಳವಣಿಗೆಗೆ ಪೂರಕವಾದ ವಾತಾವರಣ ನಿರ್ಮಾಣವಾಗುತ್ತದೆ. ಇದರಿಂದಾಗಿ ಆಧುನಿಕ ಸಣ್ಣ ಕಥಾ ಪ್ರಕಾರ ಕನ್ನಡದಲ್ಲಿ ಗಟ್ಟಿಯಾಗುತ್ತಾ, ವಿಸ್ತಾರವಾಗುತ್ತಾ ಹೋಗುತ್ತದೆ. ಈ ದಿಸೆಯಲ್ಲಿ ಪತ್ರಿಕೆಗಳ ಪ್ರೋತ್ಸಾಹ ಶ್ಲಾಘನೀಯವಾದುದಾಗಿದೆ. ಪ್ರಬುದ್ಧ ಕರ್ನಾಟಕ ಜಯಕರ್ನಾಟಕ, ಜೀವನ, ಜಯಂತಿ ಮುಂತಾದ ಪತ್ರಿಕೆಗಳು ಕಥಾ ಅಭಿವೃದ್ಧಿಗೆ ಪ್ರೋತ್ಸಾಹದಾಯಕವಾಗಿ ನಿಂತುಕೊಳ್ಳುತ್ತವೆ. ಕಥಾಂಜಲಿ, ಕಥೆಗಾರ, ಕಥಾಕುಂಜ ಮೊದಲಾದ ಮಾಸಪತ್ರಿಕೆಗಳು ಕಥೆಗಳ ಪ್ರಕಟಣೆಗಾಗಿಯೇ ಮೀಸಲಾಗಿ ಹೊಸ ಹೊಸ ಕಥೆಗಾರರನ್ನು ಬೆಳಕಿಗೆ ತರುತ್ತವೆ. ಮುದ್ರಣ ವ್ಯವಸ್ಥೆ, ಗ್ರಂಥೋದ್ಯಮ, ಮೊದಲಾದವುಗಳು ಸಾಹಿತ್ಯ ರಚನೆಗೆ, ಆ ಮೂಲಕ ಕಥಾ ರಚನೆಗೆ ಇಂಬು ನೀಡುತ್ತವೆ. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ನೇತೃತ್ವದ 'ಮುದ್ದಣ್ಣ ಸ್ಮಾರಕ ಸ್ವರ್ಣ ಪದಕಸ್ಪರ್ಧೆ; ೧೯೩೫ರ ಸುಮಾರಿನಲ್ಲಿ ಕಥೆಗಾರ ಇ.ಎ.ಭಾಸ್ಕರರಾಯರ ಹೆಸರಿನಲ್ಲಿ ಸಾಹಿತ್ಯ ಪರಿಷತ್ತು ಪ್ರಾರಂಭಿಸಿದ ಸಣ್ಣಕಥೆಗಳ ಸ್ಪರ್ಧೆ–ಹೀಗೆ ಹಲವಾರು ಸಣ್ಣಕಥಾ ಸ್ಪರ್ಧೆಗಳು ಏರ್ಪಟ್ಟು ಹುಲುಸಾದ ಹಾಗೂ ಆರೋಗ್ಯಪೂರ್ಣವಾದ ಸಣ್ಣಕಥಾ ಬೆಳವಣಿಗೆಗೆ ನಾಂದಿಹಾಡುತ್ತದೆ.

ಸಣ್ಣಕಥೆಯ ರಚನೆಯನ್ನೇ ತಮ್ಮ ಮುಖ್ಯ ಮಾಧ್ಯಮವನ್ನಾಗಿ ಮಾಡಿಕೊಂಡು ಆ ದಿಸೆಯಲ್ಲಿ ಅಪಾರ ಕೆಲಸ ಮಾಡಿದವರಲ್ಲಿ ಮಾಸ್ತಿವೆಂಕಟೇಶ್ ಅಯ್ಯಂಗಾರ್ ಮೊದಲಿಗರು ಮತ್ತು ಪ್ರಮುಖರು. ಕ್ರಿ.ಶ. ೧೯೨೧ರಲ್ಲಿ ಪ್ರಕಟವಾದ ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತೆಗಳು' ಕೃತಿಗೆ ಹೊಸ ಕನ್ನಡ ಕಾವ್ಯದಲ್ಲಿ ಯಾವ ಸ್ಥಾನವಿದೆಯೋ ಅಂತಹುದೇ ಸ್ಥಾನ ಕ್ರಿ.ಶ. ೧೯೨೦ರಲ್ಲಿ ಪ್ರಕಟವಾದ ಮಾಸ್ತಿ ಅವರ 'ಕೆಲವು ಸಣ್ಣಕಥೆಗಳು' ಕೃತಿಗೆ ಲಭ್ಯವಿದೆ. ಮೊಟ್ಟಮೊದಲ ಬಾರಿಗೆ 'ಸಣ್ಣಕಥೆ'

ಎಂಬ ಪದವನ್ನು ಬಳಸಿದವರು ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಆಗಿದ್ದಾರೆ. ಈ ಮೊದಲು ಕ್ರಿ.ಶ. ೧೯೦೦ರ ಹೊತ್ತಿಗೆ ಪಂಜೆ ಮಂಗೇಶರಾಯರ ಕಥೆಗಳು 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟಗೊಂಡು ಅವನ್ನು 'ಚಿಕ್ಕಕಥೆ' ಎಂದು ಕರೆಯುತ್ತಿದ್ದರು. ಸಣ್ಣಕಥಾ ಪ್ರಕಾರ ಮಾಸ್ತಿಯವರಿಗಾಗಿಯೇ ಕಾಯುತ್ತಿತ್ತೇನೋ ಎಂಬುವಷ್ಟರಮಟ್ಟಿನ ವಿಶಿಷ್ಟ ಸಾಧನೆಯನ್ನು ಮಾಸ್ತಿ ಅವರು ಇಲ್ಲಿ ಸಾಧಿಸುತ್ತಾರೆ. ಕನ್ನಡದ ಸಣ್ಣಕಥೆ ಪಾಶ್ಚಾತ್ಯ ಪ್ರಭಾವಕ್ಕೆ ಮೈಒಗ್ಗಿಸಿಕೊಳ್ಳುತ್ತಿದ್ದ ಕಾಲದಲ್ಲಿ ಮಾಸ್ತಿ ಅವರ ಪ್ರವೇಶ ಮಹತ್ವಪೂರ್ಣವಾದುದಾಗಿ ಪರಿಣಮಿಸುತ್ತದೆ. ಇವರು ಸತತ ಪರಿಶ್ರಮದಿಂದ ಕಥೆಗೊಂದು ಸ್ಪಷ್ಟಸ್ವರೂಪವನ್ನು ಒದಗಿಸಿಕೊಡುತ್ತಾರೆ. ಪಾಶ್ಚಿಮಾತ್ಯ ಕಥಾ ಸ್ವರೂಪವನ್ನು ಸ್ವೀಕರಿಸಿಯೂ ತಮ್ಮತನವನ್ನು ಬಿಟ್ಟುಕೊಡದ ಮಾಸ್ತಿ ಅವರ ಕುಶಲತೆಗೆ ಮೆಚ್ಚಬೇಕಾಗುತ್ತದೆ. ಮಾಸ್ತಿ ಅವರಿಗೆ ಸಾಮರ್ ಸೆಟ್‌ಮಾಮ್, ಎಡ್ಗರ್ ಅಲೆನಪೋ, ಟಾಲ್‌ಸ್ಟಾಯ್ ಮುಂತಾದ ಪಾಶ್ಚಾತ್ಯ ಬರಹಗಾರರು ಪ್ರಿಯವಾಗುತ್ತಾರೆ. ಅಲ್ಲದೆ ಇವರಿಗೆ ಕಥೆ ಬರೆಯಲು ಪ್ರೇರಣೆ ಬಂದದ್ದೇ 'ಸ್ಟ್ರ್ಯಾಂಡ್ ಮ್ಯಾಗಜೀನ್' ಎಂಬ ಆಂಗ್ಲ ಮಾಸ ಪತ್ರಿಕೆಯಿಂದ ಎಂಬುದು ಗಮನಾರ್ಹವಾಗಿದೆ.

"ಸಣ್ಣಕಥೆ ದೀರ್ಘವಾದ ಕಥಾ ಸಾಹಿತ್ಯ ರೂಪಗಳಾದ (ಫಿಷನಲ್ ಫಾರಮ್ಸ್) ಕಾದಂಬರಿ ಅಥವಾ ಕಿರುಕಾದಂಬರಿ (ನಾವೆಲಿಟ)ಗಳಂತೆ ಗದ್ಯ ಕಥಾಸಾಹಿತ್ಯದ ಒಂದು ರೂಪ. ಇದು ಪರಸ್ಪರ ಸಂಬಂಧವಿರುವ ಕೆಲವು ಅಂಶಗಳಿಂದ ಕೂಡಿದೆ. ಇವುಗಳಲ್ಲಿ ಮುಖ್ಯವಾದವು. ವಸ್ತು ಅಥವಾ ಕಥೆ ಒಳಗೊಳ್ಳುವ ಭಾವನೆ, ಸಂವಿಧಾನ ಅಥವಾ ಘಟನೆಗಳ ಯೋಜಿತ ಕ್ರಿಯೆ, ಪಾತ್ರಗಳು ಅಥವಾ ಕ್ರಿಯೆಯನ್ನು ನಿರ್ಮಿಸುವ ವ್ಯಕ್ತಿಗಳು ಮತ್ತು ಕಟ್ಟಡ (ಸೆಟ್ಟಿಂಗ್) ಅಥವಾ ಕ್ರಿಯೆ ನಡೆಯುವ ಕಾಲ ಮತ್ತು ಸ್ಥಳ. ಬೇರೆಯ ಮಾತುಗಳಲ್ಲಿ ಹೇಳುವುದಾದರೆ, ಸಣ್ಣಕಥೆ ಎನ್ನುವುದು ಒಂದು ನಿರ್ದಿಷ್ಟವಾದ ಕಾಲ ಮತ್ತು ಸ್ಥಳಗಳಲ್ಲಿ ಪಾತ್ರಗಳ ಕ್ರಿಯೆ ಪ್ರತಿಕ್ರಿಯೆಗಳ ಮೂಲಕ ಭಾವನೆಗಳನ್ನು ತೆರೆದಿಡುವಂಥದ್ದಾಗಿದೆ"[೧] ಎಂದು ಬ್ರಿಟಾನಿಕ್ ವಿಶ್ವಕೋಶದಲ್ಲಿ ಸಣ್ಣಕಥೆಯನ್ನು ಅರ್ಥೈಸಲಾಗಿದೆ. ಸಣ್ಣಕಥೆ, ಜೀವನದ ಎಲ್ಲಾ ರಂಗಗಳಲ್ಲಿಯ ಸರಿತಪ್ಪುಗಳನ್ನು, ಒಳಿತು ಕೆಡಕುಗಳನ್ನು ಚೂಟಿಯಾಗಿ ಪ್ರತಿಬಿಂಬಿಸುವ ಸಾಧನವಾಗಿದೆ. ಒಂದು ಕಾದಂಬರಿ ಸಾಧಿಸಬಹುದಾದುದನ್ನು ಯಶಸ್ವಿಯಾದಂತಹ ಸಣ್ಣಕಥೆಯೊಂದು ಸಾಧಿಸಿ ತೋರಿಸುತ್ತದೆ. ಗಾತ್ರದಲ್ಲಿ ಕಿರಿಯದಾದರೂ ಪರಿಣಾಮದಲ್ಲಿ ಹಿರಿಯ–

---

೧. ಸತ್ಯನಾರಾಯಣ ಮಲ್ಲಿಪಟ್ಟಣ : ಕನ್ನಡ ಸಣ್ಣಕಥೆ ಹೆಜ್ಜೆ – ಹಾದಿ, ಗ್ರಂಥದಲ್ಲಿ ಉದ್ಧರಿಸುವಂತೆ, ೧೯೮೫, ಪುಟ. ೯.

ದಾದುದನ್ನು ಸಾಧಿಸುವ ತುಡಿತ ಸಣ್ಣಕಥೆಗಳಿರುತ್ತದೆ. "ಸಣ್ಣಕತೆ ಅಲ್ಪಜೀವಿಗಳ ಮಹಾಕಾವ್ಯ ಎಂಬುದು ನಿಜ. ಇದಕ್ಕೆ ದರ್ಶನ, ವಿಶುದ್ಧಿಬೇಕು, ಬರೀ ಕಲಾದೃಷ್ಟಿ ಸಾಲದು, ಆಗ ಅಲ್ಪಜೀವಿಗಳ ಮಹಾಕಾವ್ಯ ಎಂಬುದು ನಿಜ. ಇದಕ್ಕೆ ದರ್ಶನ, ವಿಶುದ್ಧಿಬೇಕು, ಬರೀ ಕಲಾದೃಷ್ಟಿ ಸಾಲದು, ಆಗ ಅಲ್ಪಜೀವಿಗಳ ಕತ್ತಲೆ ಕವಿದ ಕೋಣೆಗಳಲ್ಲಿ ಸಣ್ಣಕತೆ ಕಲೆಯ ದೀವಟಿಗೆಯಾಗಿ ಹೊಕ್ಕು ಕಸವನ್ನೂ ರಸವನ್ನೂ ಬೆಳಗಿಸಬಲ್ಲುದು[೧] ಎಂದು ಡಾ. ರಂ.ಶ್ರೀ.ಮುಗಳಿ ಅವರು ಅಭಿಪ್ರಾಯಪಡುತ್ತಾರೆ.

ಆಧುನಿಕ ಸಣ್ಣಕತೆಯ ರಚನಾ ಕಾಲದಲ್ಲಿ ರಾಜಕೀಯ, ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, – ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಗಮನಾರ್ಹವಾದ ಬದಲಾವಣೆ ಉಂಟಾಗುತ್ತದೆ. ಇಂಗ್ಲಿಷ್ ವಿದ್ಯಾಭ್ಯಾಸದ ಫಲವಾಗಿ ಹೊಸ ಸಾಹಿತ್ಯ ಪ್ರಪಂಚವೊಂದರ ದರ್ಶನವಾಗಿ, ಆ ಮೂಲಕ ಪ್ರಪಂಚದ ವಿವಿಧ ಸಂಸ್ಕೃತಿಗಳ ಸಂಕ್ಷಿಪ್ತ ಪರಿಚಯವಾಗತೊಡಗುತ್ತವೆ. ವೈಜ್ಞಾನಿಕತೆ ಪ್ರಗತಿಯತ್ತ ಮುಖ ಮಾಡಿದ್ದ ಆ ಸಮಯದಲ್ಲಿ ಅಭಿಮಾನ, ಧೈರ್ಯ, ಭಕ್ತಿ, ಗೌರವ ಇತ್ಯಾದಿ ಮೌಲ್ಯಗಳು ಒಮ್ಮೆಲೆ ಜೀವಂತಗೊಳ್ಳುತ್ತವೆ. ಇವೇ ಮೊದಲಾದ ಎಲ್ಲ ಬದಲಾವಣೆಗಳೂ ಸಣ್ಣಕಥೆಯ ಮೇಲೆ ಪ್ರಭಾವಬೀರುತ್ತವೆ. ಓದುಗರ ಪ್ರತಿಕ್ರಿಯೆ ಹಾಗೂ ಪತ್ರಿಕೆಗಳು ಕೊಟ್ಟ ಪ್ರೋತ್ಸಾಹದ ಫಲವಾಗಿ, ಸಣ್ಣಕಥೆಗಳು ಭಾವಗೀತೆ, ಕಾದಂಬರಿ ಪ್ರಕಾರಗಳಂತೆಯೇ ಜನಪ್ರಿಯವಾಗುತ್ತವೆ.

ಕನ್ನಡ ಸಣ್ಣಕಥೆಯು ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯ ಎಂಬ ಸಾಹಿತ್ಯಕ ಅವಸ್ಥೆಗಳಲ್ಲಿ ವಿಕಾಸವಾಗುತ್ತಾ ಬಂದಿದೆ. "ನವೋದಯ ಅಥವಾ ಸಂಪ್ರದಾಯ ಕಾಲದ ಕಥೆಗಾರರು ಸಾಮಾಜಿಕ ಪ್ರಜ್ಞೆಗೆ ಒಳಗಾಗಿ, ಬಹಿರ್ಮುಖವಾಗಿ, ಕಥಾರಚನೆ ಮಾಡುತ್ತಿದ್ದರು. ವಾಸ್ತವವಾದದ ಗಟ್ಟಿ ನೆಲದ ಮೇಲೆ ನಿಂತು ಆದರ್ಶವಾದದ ಫಲಗಳನ್ನು ಕೊಯ್ಯುತ್ತಿದ್ದರು"[೨] ಈ ನವೋದಯ ಕಥೆಗಾರರಿಗೆ ಪ್ರೀತಿ, ಪ್ರೇಮ, ಸರಸ, ವಿನೋದ, ವೈದಿಕಧರ್ಮ, ಸನ್ಯಾಸಿಗಳು, ಬಡವ-ಬಲ್ಲಿದರು, ದಾಂಪತ್ಯಜೀವನ, ಗಣ್ಯವ್ಯಕ್ತಿಗಳು, ಹೆಣ್ಣಿನ ವಿವಿಧ ಮುಖಗಳು, ಸಮಕಾಲೀನ ಜೀವನ ಚಿತ್ರಗಳು – ಇವೇ ಮೊದಲಾದ ಅಂಶಗಳು ವಸ್ತುವಾಗುತ್ತವೆ. ಇದರಲ್ಲಿ ಆದರ್ಶಪ್ರಿಯತೆ, ಹೆಣ್ಣಿನ ಬಗೆಗಿನ ಗೌರವ, ದೇವರ ಮೇಲಿನ ನಂಬಿಕೆ, ಉತ್ಸಾಹ, ಸರ್ವಧರ್ಮ – ಸಹಾನುಭೂತಿ, ತಮ್ಮ ಸಂಸ್ಕೃತಿಯ ಬಗೆಗಿನ ಕಳಕಳಿ, ಜೀವನಶ್ರದ್ಧೆ, ಅನುಕಂಪ ಇವೇ ಮುಂತಾದ ಮೌಲ್ಯಗಳು

---

೧. ಅನಕೃ : ಸಾಹಿತ್ಯ ಮತ್ತು ಜೀವನ'ದಲ್ಲಿ ಉದ್ಧರಿಸುವಂತೆ; ಶಾರದಾ ಪ್ರಕಟನಾಲಯ, ೧೯೬೧, ಪುಟ. ೮೮.

೨. ಪ್ರಧಾನ ಸಂ. ಪ್ರೊ. ಡಿ.ಜವರೇಗೌಡ : ಪ್ರಬುದ್ಧ ಕರ್ನಾಟಕ ಚಿನ್ನದ ಸಂಚಿಕೆ; ಲೇಖನ – ಕಥಾಸಾಹಿತ್ಯ : ಲೇಖ'ಕ: ಎಂ.ವಿ.ಸೀತಾರಾಮಯ್ಯ ;೧೯೬೯, ಪುಟ. ೨೭೬

ಮುಖ್ಯವಾಗುತ್ತವೆ. ನವೋದಯ ಪಂಥದ ಮುಖ್ಯಕಥೆಗಾರರಾಗಿ, ಶ್ರೀನಿವಾಸ, ಕುವೆಂಪು, ಅಶ್ವತ್ಥ, ಆನಂದ, ಎಂ.ವಿ. ಸೀತಾರಾಮಯ್ಯ ಇವರೇ ಮೊದಲಾದವರು ಕಾಣಿಸಿಕೊಳ್ಳುತ್ತಾರೆ. ಕಥೆಗಾರ್ತಿಯರಲ್ಲಿ ತ್ರಿವೇಣಿ, ವಾಣಿ, ಹೆಚ್.ವಿ.ಸಾವಿತ್ರಮ್ಮ, ಎಂ.ಕೆ.ಜಯಲಕ್ಷ್ಮಿ, ಎಚ್.ಎಸ್.ಕಾತ್ಯಾಯಿನಿ, ಕೊಡಗಿನ ಗೌರಮ್ಮ, ಎಂ.ಸಿ.ಪದ್ಮಾ, ಗೀತಾಕುಲಕರ್ಣಿ, ಪ್ರೇಮಾಭಟ್, ಉಷಾದೇವಿ, ಎನ್.ಪಂಕಜ ಇವರೇ ಮೊದಲಾದವರು ಮುಖ್ಯರಾಗುತ್ತಾರೆ.

ಪ್ರಗತಿಶೀಲ ಸಾಹಿತ್ಯ ನವೋದಯ ಸಾಹಿತ್ಯದ ವಿರುದ್ಧವಾಗಿಯೇ ಬಂತೆಂದು ಹೇಳಬಹುದು. ಇದು ವಾಸ್ತವತಾವಾದ ಮತ್ತು ಸಾಮಾಜಿಕ ಅರಿವುಗಳನ್ನು ತನ್ನ ಮುಖ್ಯ ಬಂಡವಾಳವನ್ನಾಗಿಸಿಕೊಳ್ಳುತ್ತದೆ. ಇವರ ಕಥೆಗಳಿಗೆ ವೇಶ್ಯಾಸಮಸ್ಯೆ, ಹಳ್ಳಿ ಹಾಗೂ ನಗರ ಜೀವನಗಳು, ಸ್ತ್ರೀಯರ, ರೈತರ, ಕಾರ್ಮಿಕರ, ದುರ್ಬಲರ, ಬಡವರ, ಶೋಷಿತರ ಮತ್ತು ರಾಜಕೀಯ ಬದಲಾವಣೆಯ ಕಾಳಜಿಗಳು, ಇವೇ ಮುಂತಾದ ಸಮಸ್ಯೆಗಳು ವಸ್ತುವಾಗುತ್ತವೆ. ಇವರು ಸುಧಾರಣೆಯ ಭರದಲ್ಲಿ ಆವೇಶದಿಂದ ಬರೆಯುತ್ತಾರೆ. ಭಾಷೆಯನ್ನು ಕೆಲವೊಮ್ಮೆ ದುಂದುಗಾರಿಕೆಯಿಂದ ಬಳಸುತ್ತಾರೆ ಎಂಬ ಆರೋಪ ಇವರ ಮೇಲಿದೆ. ಈ ಆರೋಪಗಳೇನೇ ಇರಲಿ, ಇವರಲ್ಲಿನ ಸರಳತನ ಹಾಗೂ ಸಹಜತನ ಓದುಗ ವರ್ಗವನ್ನು ವಿಸ್ತರಿಸಲು ಸಹಾಯ ಮಾಡಿತು ಎಂಬ ಮಾತು ಸತ್ಯವಾದುದಾಗಿದೆ. ಸಮಾಜದಲ್ಲಿ ತುಳಿತಕ್ಕೊಳಗಾದವರ ಸ್ಥಿತಿಯನ್ನು ಓದುಗರ ಸಹೃದಯಕ್ಕೆ ದಾಖಲಿಸಿದ ಕೀರ್ತಿ ಇವರದಾಗುತ್ತದೆ. ಈ ಪಂಥದ ಮುಖ್ಯಕಥೆಗಾರರಾಗಿ ಅನಕೃ, ಚದುರಂಗ, ತರಾಸು, ಬಸವರಾಜ ಕಟ್ಟೀಮನಿ, ವ್ಯಾಸರಾಯ ಬಲ್ಲಾಳ ಮೊದಲಾದವರು ಕಾಣಿಸಿಕೊಳ್ಳುತ್ತಾರೆ.

ನವ್ಯರು ಸಮಕಾಲೀನ ಬದುಕಿನ ದ್ವಂದ್ವಗಳ ಕಡೆಗೆ ಹಾಗೂ ಸಂಕೀರ್ಣತೆಯ ಕಡೆಗೆ ಗಮನಹರಿಸುತ್ತಾರೆ. ಜೀವನದ ದೌರ್ಬಲ್ಯ, ವಿಕೃತಿ, ಜೊಳ್ಳುತನಗಳೆಲ್ಲಕ್ಕೂ ಇಲ್ಲಿ ನೆಲೆ ಸಿಕ್ಕುತ್ತದೆ. ಬದುಕಿನ ನಿರರ್ಥಕತೆ, ಏಕಾಕಿತನ, ಅಂತರ್ಮುಖತ್ವ, ಅನಾಥಪ್ರಜ್ಞೆಗಳು ಇವರನ್ನು ಸುತ್ತುವರಿಯುತ್ತವೆ. ತಂತ್ರ ಇವರ ಜೀವಾಳವಾಗುತ್ತದೆ. ದುರ್ಬಲ ನಾಯಕ ಕೇಂದ್ರಗಳ ಕೇಂದ್ರಬಿಂದುವಾಗುತ್ತಾನೆ. ಡಿ.ಹೆಚ್. ಲಾರೆನ್ಸ್, ಜೆಕಾಫ್‌ನಂತಹ ಪಾಶ್ಚಾತ್ಯ ಸಾಹಿತಿಗಳು ಇವರಿಗೆ ಪ್ರಿಯವಾಗುತ್ತಾರೆ. ಈ ಮಾರ್ಗದಲ್ಲಿ ಸಣ್ಣಕಥೆ ರಚಿಸಿದವರಲ್ಲಿ ಪಿ.ಲಂಕೇಶ, ಬಿ.ಸಿ.ರಾಮಚಂದ್ರಶರ್ಮ, ಪೂರ್ಣಚಂದ್ರತೇಜಸ್ವಿ, ಯು.ಆರ್.ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಸುಮತೀಂದ್ರ ನಾಡಿಗ, ಟಿ.ಜಿ.ರಾಘವ, ಕೆ.ಸದಾಶಿವ, ಶ್ರೀಕಾಂತ ಮುಂತಾದವರು ಪ್ರಮುಖರಾಗಿದ್ದಾರೆ. ಈ

ಸಣ್ಣಕಥಾ ಪ್ರಕಾರ ದಲಿತ, ಬಂಡಾಯ ಸಾಹಿತ್ಯ ಅವಸ್ಥೆಗಳಲ್ಲಿಯೂ ವಿಕಾಸವಾಗುತ್ತಾ ಬಂದಿದೆ.

**ನಗ್ನಚಿತ್ರಗಳು**

**ನಗ್ನಚಿತ್ರಗಳು:** ಇದೊಂದು ಆಕರ್ಷಣೀಯ ತಲೆ ಬರಹ ಹೊತ್ತ ಕಾಲ್ಪನಿಕ ಕಾದಂಬರಿ. ಓದುಗರಿಗೆ ಅಲ್ಲಲ್ಲೇ ಕುತೂಹಲ ತಣಿಸಬಲ್ಲ ಸನ್ನಿವೇಶ-ಗಳಿಂದೊಡಗೂಡಿದೆ. ಸಮರ್ಥಯುತವಾದ ಶಕ್ತಿಯುತವಾದ ಲೇಖನಿಯಿಂದಾಗಿ ಸ್ವಾರಸ್ಯಕರ ನಿರೂಪಣೆ-ಸರಸೋಲ್ಲಾಪ ಶೈಲಿ-ಓದುಗರಿಗೆ ಮುದನೀಡಬಲ್ಲದು. ನಗ್ನಚಿತ್ರಗಳಂತಹ ಕಾಲ್ಪನಿಕ ಕಾದಂಬರಿಗಳನ್ನು ಬರೆಯುವ ಉದ್ದೇಶ ಆತ್ಮೋಲ್ಲಾಸವಲ್ಲ; ಕೀರ್ತಿಕಾಮನೆಯಲ್ಲ; ಕೇವಲ ಧನಸಂಗ್ರಹಕ್ಕಾಗಿಯೂ ಅಲ್ಲ; ಬದಲಾಗಿ ದೇವಮಂದಿರಗಳೆನಿಸಿದ ಶೈಕ್ಷಣಿಕ ಕ್ಷೇತ್ರಗಳು ತತ್ರಾಪಿ ವಿಶ್ವವಿದ್ಯಾನಿಲಯ-ಗಳಂತಹ ಪೂಜನೀಯ ಸ್ಥಳಗಳಲ್ಲಿ ಹೇಳಿಕೊಳ್ಳಲಾಗಿದೆ. ದಿನೇ ದಿನೇ ಉಲ್ಬಣಗೊಳ್ಳುತ್ತಿರುವ 'ಮಹಾವ್ಯಾದ ನಿವಾರಣೆ ಬಗೆಗೆ ಸಾಮಾಜಿಕ ತಿಳಿವಳಿಕೆ ಮೂಡಿಸಬಲ್ಲ, ಸಾಂಸ್ಕೃತಿಕ ಘನತೆಯನ್ನು ಎತ್ತಿ ಹಿಡಿಯಬಲ್ಲ ಸಮರ್ಥ ಔಷಧೋಪಚಾರಗಳ ಮೂಲಕ ಯತ್ನಿಸಬೇಕಾದ್ದು ಶಿಕ್ಷಣ ತಜ್ಞರ, ಸಾಹಿತಿಗಳ, ಬರಹಗಾರರ, ಹಿರಿಯರೆನಿಸಿಕೊಂಡ ಎಲ್ಲರ ಆದ್ಯಕರ್ತವ್ಯ. ಅವಿಶ್ರಾಂತವಾಗಿ ಬೆಳೆಯುತ್ತಿರುವ, ಅಬಾಧಿತವಾಗಿ ಪಸರಿಸುತ್ತಿರುವ, ಅನಂತವಾಗಿ ವ್ಯಾಪಿಸುತ್ತಿರುವ, ಶೈಕ್ಷಣಿಕ ಕುಂದುಕೊರತೆಗಳ ಬಗೆಗೆ, ಅನೀತಿ, ಅನ್ಯಾಯ, ಅಸತ್ಯ, ಭ್ರಷ್ಟತೆ ಎಲ್ಲಿ ಯಾವ ರೂಪದಲ್ಲಿ ಕಂಡುಬಂದರೂ ಅದನ್ನು ಎದೆಗಾರಿಕೆಯಿಂದ ಹೇಳಬೇಕಾದುದು ತಿದ್ದಬೇಕಾದುದು ಸತ್ಯಸಾಧಕರೆನಿಸಿದ ಶಿಕ್ಷಣ ಪ್ರೇಮಿಗಳ ಆದ್ಯಕರ್ತವ್ಯ. ದೇವಗೆರೆ ವಿಶ್ವವಿದ್ಯಾನಿಲಯದಲ್ಲಿ ನಡೆಯಬಹುದಾದ ಲೋಪ-ದೋಷಗಳನ್ನು ಕುರಿತ ವಿಶಿಷ್ಟರೀತಿಯ ಕುತೂಹಲಕಾರ ಕಾದಂಬರಿ 'ನಗ್ನಚಿತ್ರಗಳು'.

ಸಾಮಾಜಿಕ ಸಮಸ್ಯೆಗಳನ್ನು ಕಾದಂಬರಿಯ ರೂಪದಲ್ಲಿ ಹೊರ-ಹೊಮ್ಮಿಸುವಾಗ ಕೃತಿಕಾರ ತನ್ನ ಕಲ್ಪನಾಲೋಕದಲ್ಲಿ ಯಥೇಚ್ಛವಾದ ವಿಹಾರದ ಮೂಲಕ ಕಂಡುಕೊಂಡ ಸತ್ಯವನ್ನು ಎರಕದಲ್ಲಿ ಹೊಯ್ದಾಗ ಅದು ಆತನ ಆಳವಾದ ವಿಚಾರ ವಿಮರ್ಶೆಯಿಂದೊಡಗೂಡಿದ, ಕಾಲ್ಪನಿಕ ದೃಷ್ಟಿಯಿಂದ ಕೂಡಿರುವ ಸತ್ಯವನ್ನು, ಅದರ ನೆಲೆಗಾಗಿ ತ್ರಿಕರಣಪೂರ್ವಕವಾಗಿ ನಿಷ್ಪಕ್ಷಪಾತ ದೃಷ್ಟಿಯಲ್ಲಿ ಸ್ಪಷ್ಟಪಡಿಸಿರುವುದು ಗೋಚರವಾಗುತ್ತದೆ. ಯಾವುದೇ ಒಂದು ಕೃತಿ - ನಿರ್ದಿಷ್ಟ ವ್ಯಕ್ತಿ, ಸಂಸ್ಥೆಯನ್ನು ಉದ್ದೇಶಿಸಿ ಹೇಳದ್ದಲ್ಲವಾದರೂ ತಾದ್ರೂಪ್ಯ ಪಡೆದಿರಬಹುದಾದ ವ್ಯಕ್ತಿ ಸಂಸ್ಥೆಗಳು ಕೃತಿಯಲ್ಲಿನ ವಸ್ತು - ತಮ್ಮ ಜೀವನದ ಪ್ರತೀಕವೆಂದು ಇದನ್ನು ಓದಿದ ಕೆಲವರಲ್ಲಿ ಭಾಸವಾದಲ್ಲಿ ಅದು ಅವರವರ

ಮನೋಧರ್ಮಕ್ಕೆ ಸೇರಿದ ವಿಚಾರವಷ್ಟೇ! ಆದರೆ ಓದುಗನ ಅಂತರಾಳವನ್ನು ಶುಚಿಮಾಡಿ ಅವನಲ್ಲಿ ಮನಃಶಾಂತಿ ಮೂಡುವಂತೆ ಮಾಡಬಲ್ಲಗುರಿ ಹೊತ್ತ ಕಾದಂಬರಿ 'ನಗ್ನ ಚಿತ್ರಗಳು'.

ಕಾಲ್ಪನಿಕ ದೇವಗೆರೆ ವಿಶ್ವವಿದ್ಯಾನಿಲಯದಲ್ಲಿ ಬೆಟ್ಟಯ್ಯ, ಕುಶಾಲಪ್ಪ, ಚಿಕ್ಕಣ್ಣ, ಜುನಿಯಮ್ಮ, ವೆಂಕಟಯ್ಯ, ಸಂಕಟೇಶ, ಪಾಲಯ್ಯ, ಸೇವಂತಿ ಇವರೆಲ್ಲಾ ಶಕ್ತಿಮೀರಿ ತಮ್ಮ ತಮ್ಮ ಪಾತ್ರಗಳಲ್ಲಿ ವಿಜೃಂಭಿಸಿದ್ದಾರೆ. ಅಹಿತಕರ ಸನ್ನಿವೇಶಗಳ ಸೃಷ್ಟಿಕರ್ತರಾಗಿ ಗೆಲುವು ಸಾಧಿಸಿದವರು ಕೆಲವರಾದರೆ, ಅಪ್ರಬುದ್ಧ ಶಕ್ತಿ ಅಪರಿಮಿತ ಕುಯುಕ್ತಿ, ಅಸಂಬದ್ಧಯುಕ್ತಿಗಳ ಮೂಲಕ ತಮ್ಮ ಬೇಳೆ ಬೇಯಿಸುವಲ್ಲಿ ಸಫಲರಾಗಿದ್ದಾರೆ. ಸಭ್ಯವಲ್ಲದ ಸಹನೀಯವಲ್ಲದ, ಶುಭ್ರವಲ್ಲದ ಪ್ರತಿಯೊಂದನ್ನೂ ವ್ಯಾಪಾರೀಕರಣ-ಗೊಳಕೊಳ್ಳುವ, ದಿಢೀರ್ ಶ್ರೀಮಂತಿಕೆಗಾಗಿ ಬಾಯ್ದೆರೆದ, ಎಲ್ಲಾ ರೀತಿಯ ವಾಮಮಾರ್ಗಗಳನ್ನು ನೀತಿಯುತವೆಂದು ಭಾವಿಸಿದವರೇ ತುಂಬಿರುವ ಮಧ್ಯದಲ್ಲಿ ನೈತಿಕ ವ್ಯವಸ್ಥೆಗೆ ಆಸ್ಪದವೆಲ್ಲಿ ದೊರೆತೀತು?

ಶೈಕ್ಷಣಿಕ ನೈತಿಕ ಪತನದ ಭೀಕರ ಪ್ರವಾಹವನ್ನು ನೋಡುವಂತಾಯಿತಲ್ಲ ಎಂದು ಹಲುಬುವ ಧರ್ಮಪಾಲನಂತಹವರ ಜತೆಯಲ್ಲೇ ಪಾಲಯ್ಯನಂತಹವರೂ ಇರುತ್ತಾರಲ್ಲವೇ? ವಿದ್ಯೆಯಲ್ಲಿ, ಪ್ರತಿಭೆಯಲ್ಲಿ, ಕುಶಲತೆಯಲ್ಲಿ. ಆಡಳಿತದಲ್ಲಿ ಎಲ್ಲಕ್ಕಿಂತ ಮಿತಿಲಾಗಿ ಆದರ್ಶವಾದ ಸಭ್ಯತೆಯಲ್ಲಿ ಚಂದ್ರಹಾಸ-ನಂತಹವರೆಲ್ಲೆಲ್ಲಿರುತ್ತಾರೋ ಅಲ್ಲೆಲ್ಲಾ ಅವರ ವಿರುದ್ಧ ಶಕ್ತಿಗಳೂ ತಾನೇ ತಾನಾಗಿ ಕೆಲಸ ಮಾಡುವವರೂ ಇರಲೇಬೇಕಲ್ಲವೇ? ಸ್ವಾರ್ಥಸಾಧನೆಗಾಗಿ ಮುಖಸ್ತುತಿ ಮಾಡುವವರನ್ನು ನಿಜವೆಂದು ನಂಬಿ ಅವರ ಇಷ್ಟಾರ್ಥಗಳನ್ನೀಡೇರಿಸುವ ಸ್ವಾಭಾವಿಕವಾದ ನೈಜಸ್ಥಿತಿಯನ್ನವಲೋಕಿಸಲಾಗದೆ ಅನುಭವಿಸಿದ ನಷ್ಟದ ಪ್ರಮಾಣವನ್ನು ಚಾರಿತ್ರಿಕ ಹಿನ್ನೆಲೆಯನ್ನು ಓದಿಯೋ, ಕೇಳಿಯೋ ಅರಿಯಲಾಗದವರೇ ತುಂಬಿರುವ ಇಂತಹ ಸ್ಥಳಗಳಲ್ಲಿನ ಮದ-ಮಧ್ಯದ ಅಮಲಿನಿಂದ ಆವೃತರಾದವರೇ ಅಪರಿಮಿತರೆನಿಸಿದ ಮೇಲೆ ಅದು ಅಪವಿತ್ರವೆನಿಸದೆ ಮತ್ತೇನಾದೀತು!

ರಾಘವ-ಗಿರಿಜೆ-ಮಹದೇವಯ್ಯ-ಆನಂದಮೂರ್ತಿ, ಮಾನಪ್ಪ, ಶಂಕರ ಹೀಗೆ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಕಾಲ್ಪನಿಕ ಪಾತ್ರಗಳು ತಮ್ಮದೇ ಆದ ರೀತಿಯಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತಾರೆ. ಅಷ್ಟೇ ಕ್ರಿಯಾಶೀಲತೆಯಿಂದ 'ತಮ್ಮತನ'ವನ್ನು ತಾವೇ ಗುರುತಿಸಿಕೊಳ್ಳುತ್ತಾರೆ.

ಎಂತಹ ನೀಚ ಕೆಲಸಕ್ಕಾದರೂ ಸೈ ಎನ್ನುವ ಕುಲಪತಿಗಳು, ಹಣಕ್ಕಾಗಿ ಏನು ಬೇಕಾದರೂ ಮಾಡಲು ಸಿದ್ದರಾದ ಸಮರ್ಥರು, ಅತಿವಿನಯವಂತ ಹುಸಿನಗೆಯಲ್ಲೆ ತನಗಾಗದ ಪ್ರತಿಭಾವಂತರನ್ನು ಬಗ್ಗು ಬಡಿಯಬಲ್ಲ

ಹಗೆಯವೀರರು. ದುಷ್ಪರಿಂದಲೇ ಸುತ್ತುವರಿದವರೇ ಎಲ್ಲಾ ಸ್ಥಾನಮಾನಗಳನ್ನು ಕಲ್ಪಿಸಿ, ಅನರ್ಹರನ್ನೇ ನೋಡುವ ನಯವಂಚಕರು ಅರ್ಹತೆಯ ಮಾನದಂಡವನ್ನು ಪಕ್ಕಕ್ಕೆ ಸರಿಸಿ 'ಮಾನ'ವೆಂದರೇನೆಂಬುದನ್ನರಿಯುವವರನ್ನೇ ಮಾನದಂಡ ಮಾಪಕರನ್ನಾಗಿ ವಿಜೃಂಭಿಸುವುವು. ಸಾಧನೆ ಸಿದ್ಧಿಗಳೆಂದರೆನೆಂದೇ ಅರಿಯದ ಸಂಶೋಧಕರು ಪಾಠಪ್ರವಚನಗಳ ಬಗೆಗೆ ತಮಗೆ ತಿಳಿಯದ್ದನ್ನು ವಿದ್ಯಾರ್ಥಿಗಳಿಗೆ ಬೋಧಿಸುವ ಅಧ್ಯಾಪಕರು, ಹಣ ನೀಡಿ; ಭತ್ಯ ಸೇವೆಗೈದು ಪಿಹೆಚ್.ಡಿ. ಗಿಟ್ಟಿಸಿ ಸೃಷ್ಟಿಕರ್ತನಿಗೆ ಸವಾಲು ಹಾಕಬಲ್ಲ ಪ್ರಾಧ್ಯಾಪಕರು, ಸ್ವಂತಿಕೆಯಿಲ್ಲದ, ಶ್ರಮವಹಿಸದ, ಸೋಪಜ್ಞತೆಯಿಂದ ಕೂಡಿರದ, ಅಧ್ಯಯನ, ಅಧ್ಯಾಪನ ಕ್ಷೇತ್ರದಲ್ಲಿ ಅಪ್ರಬುದ್ಧರೆನಿಸಿದವನ್ನೇ ಆಯ್ದುಕೊಂಡ ಕೆಲ-ಕುಲಪತಿಗಳಿಂದಾವೃತ್ತವಾದ ವಿಶ್ವವಿದ್ಯಾನಿಲಯ ಹೇಗೆ ಘಮಘಮಿಸೀತು? ಇಂತಹವರ ನೇತೃತ್ವದಿಂದ ಹೊರಹೊಮ್ಮಿದ ವಿದ್ಯಾರ್ಥಿಗಳ ಭವಿಷ್ಯವೇನಾದೀತು? ನಾಡು-ನುಡಿಯ ನಿಷ್ಠೆ ಎಂತಹುದಿದ್ದೀತು? ಪ್ರಾಮಾಣಿಕತೆ, ಸೃಜನಶೀಲತೆ ಹೇಗೆ ಬೆಳೆದೀತು?

ಜೀವನಚರಿತ್ರೆ ಬರೆದವರ ಸಾಲಿನಲ್ಲಿ ದೇಜಗೌರವರ ಹೆಸರು ಪ್ರಮುಖವೆನಿಸುತ್ತದೆ. ಇವರು ಬರೆದಿರುವ ಜೀವನಚರಿತ್ರೆಗಳ ಗುಣ ಮತ್ತು ಸಂಖ್ಯೆಗಳೆರಡರ ದೃಷ್ಟಿಯಿಂದಲು ಇವರೇ ಮೊದಲಿಗರು. ಲಲಿತದ ಜತೆಯಲ್ಲೇ ಗಾಂಭೀರ್ಯವನ್ನು ಮೈದುಂಬಿ ಹೊರಹೊಮ್ಮಿ ಬರುವ ಶೈಲಿ ಇವರದು, ಶಬ್ದಾರ್ಥಗಳೆರಡರ ಸರಸ-ಸಜ್ಜನಿಕೆಯಿಂದ ವಿಹರಿಸಿ ವಿರಮಿಸಬಲ್ಲದು. ಪ್ರೊ. ದೇಜಗೌರವರು ಕನ್ನಡನಾಡಿನ ವಿನೂತನ ಆಸ್ತಿ, ನಿತ್ಯಕುಲಪತಿ, ಕನ್ನಡ ದಿಗ್ಗಜ ನಮ್ಮ ದೇಜಗೌ ಎನ್ನುವುದು ಪ್ರತೀತಿಯೆನಿಸಿದೆ. ಗದ್ಯಂ ಕವೀನಾಂ ನಿಕಷಂ ವದಂತಿ ಎನ್ನುವ ಮಾತಿನ ನಿಜವಾದ ಗದ್ಯಶೈಲಿಯ ಒರೆಗಲ್ಲು ಪ್ರೊ. ದೇಜಗೌರವರು, ಸೊಗಸಾದ ಭಾಷೆ, ಸತ್ತ್ವಭರಿತ ಸಂಭಾಷಣೆ, ಸ್ವಾರಸ್ಯಕರ ನಿರೂಪಣೆ ಶಕ್ತಿಯುತ ವಾಕ್ಯಸರಣಿಗಳಿಂದೂಡಗೂಡಿದ ಮನೋಜ್ಞ ಗದ್ಯಶಿಲ್ಪಿ ಪ್ರೊ. ದೇಜಗೌ.

ಕಥೆ, ಕವನ, ಕಾದಂಬರಿ, ಕುವೆಂಪು ಸಾಹಿತ್ಯ, ಸಂಶೋಧನೆ, ಸಂಪಾದಿತ ಕೃತಿಗಳು, ಅಂಕಣಬರಹ, ಪ್ರವಾಸಸಾಹಿತ್ಯ, ವಚನಸಾಹಿತ್ಯ, ಜೀವನಚರಿತ್ರೆ, ವ್ಯಕ್ತಿಚಿತ್ರಗಳು, ವಿಮರ್ಶೆ, ನಾಟಕ, ಮುನ್ನುಡಿಗಳು, ಸಂಪಾದಕೀಯ, ಅನುವಾದ, ಜಾನಪದ ಸಾಹಿತ್ಯ, ಹೀಗೆ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಅಲ್ಲಿನ ಎಲ್ಲ ಪ್ರಬೇಧಗಳನ್ನು ತಮ್ಮ ಕೊಡುಗೆಯ ಮೂಲಕ ಕನ್ನಡಮ್ಮನಿಗೆ ಅರ್ಪಿಸಿದ್ದಾರೆ ಪ್ರೊ. ದೇಜಗೌರವರು. ಪ್ರೊ. ದೇಜಗೌರವರು ಸಂಪಾದಿಸಿರುವ ಕೃತಿಗಳಲ್ಲಿನ ವಿಚಾರಶೀಲ ವಿವೇಚನೆ, ವಿಮರ್ಶೆ, ಪದಬಳಕೆಯಲ್ಲಿನ ಸೊಗಸುಗಾರಿಕೆ, ಆರೋಗ್ಯವಂತ ಹೃದಯ ಶ್ರೀಮಂತಿಕೆ ಕನ್ನಡ ಸರಸ್ವತಿಯ ಭಾಷಾಭಂಡಾರಕ್ಕೆ ತತ್ರಾಪಿ ಗದ್ಯಸಾಹಿತ್ಯಕ್ಕೆ ದೊರೆತ ಅಮೋಘ ಕೊಡುಗೆಯಾಗಿದೆ.

# ಅಧ್ಯಾಯ – ೩
# ದೇಜಗೌರವರ ಕಥೆಗಳು

ಗದ್ಯ ಶಿಲ್ಪಿ ಎಂದೇ ಹೆಸರಾಗಿರುವ ಪ್ರೊ. ದೇಜಗೌರವರು ಎರಡು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ದೇವರ ಮಗು ಮತ್ತು ಇತರ ಕಥೆಗಳು, ಜೀತ ಮತ್ತು ಇತರ ಕಥೆಗಳು ಎಂಬ ಸಂಕಲನಗಳಲ್ಲಿ ಒಟ್ಟು ೩೭ ಕಥೆಗಳಿವೆ. ಅಲ್ಪ ಕಥೆಗಳಲ್ಲಿಯೇ ಇವರು ಕನ್ನಡದ ಪ್ರಬುದ್ಧ ಶ್ರೇಷ್ಠ ಕಥೆಗಾರರೆಂದು ಎಲ್ಲಾ ಲಕ್ಷಣಗಳು ದೊರೆಯುತ್ತಿವೆ. ಇಲ್ಲಿಯ ಕಥೆಗಳಲ್ಲಿ ಗ್ರಾಮ್ಯ ಜೀವನದ ವೈವಿಧ್ಯಮಯ ಘಟನೆಗಳೇ ವಸ್ತುವಾಗಿ ಅರಳಿವೆ. ಗ್ರಾಮ್ಯಜೀವನದ ನೋವುನಲಿವುಗಳಿವೆ, ಜಾನಪದ ಅಂಶಗಳಿವೆ, ಸಾಮಾಜಿಕ ಮೌಲ್ಯಗಳು ಇಲ್ಲಿಯ ಕಥೆಗಳಲ್ಲಿ ಹಾಸುಹೊಕ್ಕಾಗಿವೆ. ಪಾತ್ರಗಳ ಸೃಷ್ಟಿಯಲ್ಲಿ, ಅವುಗಳು ಆಡುವ ಮಾತುಗಳಲ್ಲಿ ವಾಸ್ತವಿಕತೆ, ಸಹಜತೆಗಳನ್ನು ಮೂಡಿಬಂದಿವೆ. ಶೈಲಿಯಲ್ಲಿ ಸಂಯಮ ಇರುವುದನ್ನು ಕಾಣಬಹುದು. ಬದುಕಿನ ಸಂಕೀರ್ಣಸ್ಥಿತಿ ಈ ಕಥೆಗಳಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ಈ ಹಿನ್ನೆಲೆಯಲ್ಲಿ ನನ್ನ ಪ್ರಬಂಧದಲ್ಲಿ ದೇಜಗೌರವರ ಕಥೆಗಳನ್ನು ಚರ್ಚಿಸಲಾಗಿದೆ. ಕಥೆಗಳಲ್ಲಿ ಚಿತ್ರಿತವಾಗಿರುವ ಬದುಕಿನ ವಿವಿಧ ಬಗೆಯನ್ನು ಬಿಡಿಬಿಡಿಯಾಗಿ ನೋಡಲಾಗುವುದು.

**ಬಲಿ:** ಈ ಕಥೆಯಲ್ಲಿ ಬರುವ ಪಾತ್ರಗಳು (ಚೆನ್ನಿ), ನಿಂಗಮ್ಮ, ಕಾಡಯ್ಯ ದಂಪತಿಯ ಮಗಳು ಚೆನ್ನಿ (ಎಂಟು ವರ್ಷದವಳು), ಲಿಂಗಯ್ಯ(ಚಿಕ್ಕಪ್ಪ) ಊರಿನಗೌಡ, ತುಂಗಭದ್ರೆ – ಹಸು.

ತುಂಗಭದ್ರೆಯನ್ನು ಕಾಡಯ್ಯ ಅಡವಿಡಲು ಎಳೆದುಕೊಂಡು ಹೋಗುವಾಗ ಅಯ್ಯಯ್ಯೋ. ನೋಡವ್ವ ಎಳ್ಕೊಂಡೋಗ್ತಾ ಅವ್ನೆ' ಎಂದು ಕಿಟಾರನೆ ಕಿರುಚಿಕೊಂಡಳು ಚೆನ್ನಿ. ಅವಳ ಆಕ್ರಂದನ ಅವಳನ್ನು ಸಮಾಧಾನಪಡಿಸುವ ಜನ ಯಾರೂ ಅವಳತ್ತಿರ ಇರಲಿಲ್ಲ. ಚಿಕ್ಕಪ್ಪ ಬಂದು ಕೇಳುತ್ತಾನೆ. ಚೆನ್ನಿ ಕಣ್ಣರಳಿಸಿ, 'ಅವ್ವ, ಅವ್ವ ನನ್ನ ತುಂಗಭದ್ರೆ ಎಲ್ಲಿ? ಎಂದು ಕೂಗಿಕೊಂಡಳು. ಅಯ್ಯೋ ಚಿಕ್ಕಪ್ಪ, ನೀನ್ಯಾಕೆ ಬಂದೆ? ಅಪ್ಪ ಕಂಡರೆ ಬಿಟ್ಟಾನೆ? ನನ್ನ ಹಸು ಒಡ್ಕೊಂಡು ಹೋದ, ಅಯ್ಯೋ ನನ್ನ ಹಸುಬೇಕು. ನೀನು ಹೊರಟುಹೋಗು' ಎಂದು ಮತ್ತೆ ಕಣ್ಣುಮುಚ್ಚಿಕೊಳ್ಳುವಳು. 'ಒಂದಿಷ್ಟು ಅಂಬಲಿ ತರಲೇ?' ಎಂದಾಗ 'ಅಪ್ಪಗ್ಗೆ ಗೊತ್ತಾದ್ರೆ ಚರ್ಮ ಸುಲಿದು ಬಿಡ್ತಾನೆ. ಎರಡು ದಿನದಿಂದ ಒಲೆ ಬೆಂಕಿ ಕಂಡಿರಲಿಲ್ಲ. ಚೆನ್ನಿಯ ಅವ್ವ ನಿಂಗಮ್ಮ ಕೂಲಿನಾಲಿಗೂ ಹೋಗಿರಲಿಲ್ಲ. ಹಿಂದಿನ

ದಿನ ಬೆಳಗ್ಗೆ ಈಯಲಿಗೆ ಬಂದಿದ್ದ ಹಸು ಹೊಡೆದುಕೊಂಡು ಹೋಗಿದ್ದ ಅಪ್ಪ ಕಾಡಯ್ಯ ಮನೆಗೆ ಹಿಂದಿರುಗಿರಲಿಲ್ಲ. ಎಂಟು ವರ್ಷದ ಚೆನ್ನಿಗೆ ರಾತ್ರಿಯೆಲ್ಲ ಹಸುವಿನದೇ ಚಿಂತೆ. ಆ ಚಿಂತೆಯ ಕೆಂಡದಲ್ಲಿ ಅವಳ ಮೈ ಬೇಯುತ್ತಿದ್ದರು. ಹೊಟ್ಟೆಗೆ ಊಟವಿಲ್ಲದಿದ್ದರೂ, ಎಷ್ಟೇ ಹಸಿವಾಗಿದ್ದರೂ ಚಿಕ್ಕಪ್ಪನಿಗೆ ಊಟ ಒಲ್ಲೆ ಎನ್ನುತ್ತಾಳೆ. ಬಡತನ ಹಸಿವಿದ್ದರೂ ಆಕೆಗೆ ತುಂಗಭದ್ರೆಯ ಮೇಲಿನ ಪ್ರೀತಿಯಿಂದ ಅದ್ಯಾವುದು ಬೇಕಾಗಿರುವುದಿಲ್ಲ. ಅವ್ವ ತಟ್ಟುತ್ತ ಅಳಬೇಡ, ಕಂದ. "ನೀನೊಬ್ಬೆ ನನ್ಗೆ ದಿಕ್ಕು. ನಿನ್ನೋಡ್ಕೊಂಡು ಜೀವ ಇಡ್ಕೊಂಡಿದ್ದೀನಿ"[೧] ಎಂದು ಗೋಳ್ಗರೆಯುತ್ತಾಳೆ. ಚೆನ್ನಿಯಲ್ಲಿದ್ದ ತುಂಗಭದ್ರೆಯ ಪ್ರೀತಿ. ಅದನ್ನು ಅಪ್ಪನೇ ಅಡವಿಡಲು ಒಯ್ದಾಗ ಅವಳ ಆಕ್ರಂದನ, ಉಕ್ಕಿಸುವ ಮಾತೃಶೋಕ ಇಂಥ ಅಂಶಗಳು ಈ ಕತೆಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿರುವುದನ್ನು ಕಾಣಬಹುದು.

"ಅಂಥ ಚೆಂದುಳ್ಳಿ ಹಸು, ಅಜ್ಜಿ ಕೊಟ್ಟ ಹಸು ಮತ್ತೆ ಸಿಕ್ಕೀತೆ ಅವ್ವ? ಇನ್ನು ಮೇಲೆ ಯಾರ ಜತೇಲಿ ಹೊಲಕ್ಕೆ ಹೋಗ್ಲಿ, ಯಾರ್ಗಾಗಿ ಹುಲ್ತರ್ಲಿ. ಯಾರ್ಹತ್ರ ಮಾತಾಡ್ಲಿ, ಯಾರ್ಸಂಗ್ಡ ಆಟ ಆಡ್ಲಿ? ಏಳೆಂಟು ದಿನದಲ್ಲಿ ಈಯ್ತದೆ, ಹಾಲು ಮೊಸರು ಕುಡೀಬೌದು; ಹಾಲು ಮಾರಿ ರವಿಕೆ ಲಂಗ ಒಲಿಸ್ಕೋಬೌದು; ಕರು ಸಂಗಡ ಮುದ್ದಾಡ್ಬೌದು, ಅಂದ್ಕೊಂಡಿದ್ದೆ' ಎಂದು ಚೆನ್ನಿ ಬಿಕ್ಕಿ ಬಿಕ್ಕಿ ಅತ್ತಳು. 'ಬೆಳಕ್ಹರಿದ್ಮೇಲೆ ನೋಡೂವ ಮಲೀಕೊ ಈಗ"[೨] ಎಂದು ಅವ್ವ ಮಗಳನ್ನು ಮುದ್ದಿಸಿ, ಅವಳ ಪಕ್ಕದಲ್ಲಿ ಮುದುರಿಕೊಂಡಳು.

ಹೊತ್ತು ಹುಟ್ಟಿ ನಾಲ್ಕಾಳುದ್ದ ಮೇಲೆ ಬಂದರೂ ಅವ್ವ ಮಗಳು ಮೇಲೇಳಲಿಲ್ಲ. ಎದ್ದು ಮಾಡುವುದೇನಿದೆ? ಮೇಯಿಸಲು ಹಸುವಿಲ್ಲ, ಬೇಯಿಸಲು ಹಿಟ್ಟಿಲ್ಲ; ಕೂಲಿಗೆ ಹೋಗಲು ಮನಸ್ಸಿಲ್ಲ, ಅವ್ವ ಮಕ್ಕಳಿಬ್ಬರೂ ಗುಬರುಹಾಕಿಕೊಂಡು, ನಡುನಡುವೆ ಬಿಕ್ಕಿ ಬಿಕ್ಕಿ ಅಳುತ್ತ, ಸಂಜೆಯ ತನಕ ಬಿದ್ದುಕೊಂಡಿದ್ದರು. ಮಗಳು ನಿದ್ದೆ ಮಾಡುತ್ತಿದ್ದುದನ್ನು ನೋಡಿ ನಿಂಗಮ್ಮ ಬುಡ್ಡಿ ಹೊತ್ತಿಸಿಟ್ಟು ಬೀದಿಗೆ ನಡೆದಳು. ನೇರವಾಗಿ ಊರಗೌಡನ ಮನೆಗೆ ಹೋದಳು. ಗೌಡ ಜಗಲಿಯ ಮೇಲೆ ಕುಳಿತ್ತಿದ್ದ. ಬಿಂದಿಯ ಮೂಲಕ ಮೈಕಾಣುತ್ತಿದ್ದ, ಮುಖದ ಮೇಲೆ ಮುಸುಕು ಹಾಕಿಕೊಂಡು ನಿಂತಿದ್ದ ನಿಂಗಮ್ಮನನ್ನು ಕುರಿತು 'ಏನ್ಬಂದೆ, ನಿಂಗೀ? ಎಂದು ಪ್ರಶ್ನಿಸಿದನು. ನಿಂಗಮ್ಮ ನಿಮಗರ್ಥವಾಗೋಲ್ವೆ? ಎಂದು ತಡವರಿಸಿದಳು. 'ನಿಮ್ಮಪ್ಪನಿಗೆ ಬುದ್ಧಿಯಿಲ್ಲ. ನಿನ್ನಂಥ ಗರತೀನ, ಚೆಲುವೀನ ಆ ಮೋಲಿಗೆ ಮದುವೆ ಮಾಡಿಕೊಡದೆ? 'ನನ್ನಣೇಲಿ ಬರೆದದ್ದಕ್ಕೆ ಯಾರೇನು ಮಾಡ್ತಾರೆ? ಎಂಬುದು.

---

೧. ದೇಜಗೌ, 'ದೇವರ ಮಗು ಮತ್ತು ಇತರ ಕಥೆಗಳು : ಬಲಿ, ಪುಟ. ೨.
೨. ಅದೇ, ಪುಟ. ೨.

ಪಾಲಿಗೆ ಬಂದದ್ದೆ ಪಂಚಾಮೃತವೆಂದುಕೊಳ್ಳುತ್ತಾಳೆ. ಅವರಿಗೆ ಒಂದಿಷ್ಟು ಬುದ್ಧಿಹೇಳಿ ಎಂದಾಗ 'ಓಹೋ, ನಿನ್ಗಂಡನೆ, ಬುದ್ಧಿ ಹೇಳಿದರೆ ಕೇಳೋನು, ಹೋಗು, ಹೋಗೆ, 'ನಿನ್ನೆ ದಿನ ಗಬ್ಬದ ಹಸು ಬಂದಿತ್ತು. ಅದನ್ನೂ.... ' 'ನಾನೇನೂ ಕೊಡು ಅಂತ ಕೇಳ್ಲಿಲ್ಲ ಕಣೆ; ಅವನೇ ಹೊಡ್ಕೊಂಡು ಬಂದು ಬಿಟ್ಟು, ನೂರು ರೂಪಾಯಿ ಈಸಿಕೊಂಡು ಹೋದ'.

ನಿಂಗಮ್ಮನ ಕಣ್ಣಿಗೆ ಕತ್ತಲೆ ಕವಿದಂತಾಯಿತು; ಕಂಠ ಗದ್ಗದಿಸಿತು, "ಅದು ನನ್ನ ಮಗಳು ಮೇಯಿಸ್ತಾ ಇದ್ರಪ್ಪ, ಅದು ಅಂದ್ರೆ ಅವಳಿಗೆ ಪ್ರಾಣ. ನನ್ನ ಕಿವಿ ವಾಲೆ ಹೋದಾಗ ನಾನು ಚಿಂತಿಸಲಿಲ್ಲ, ಕೂಲಿನಾಲಿ ಮಾಡಿ ತೀರಿಸ್ತೀನಿ, ಹಸು ಬಿಟ್ಟು ಕೊಡ್ರಪ್ಪ, ಅದಿಲ್ಲ ಅಂದ್ರೆ ನನ್ಮಗ್ಳು ಸತ್ತೋಗ್ತದೆ ಕಣ್ರಪ್ಪ"[೧] ಎಂದು ಹೇಳುವಾಗ ಗ್ರಾಮೀಣ ಜನರು ವಯಸ್ಸಿನ ಅಂತರವಿಲ್ಲದೆ ಸಾಕು ಪ್ರಾಣಿಗಳ ಮೇಲೆ ತಮ್ಮ ಜೀವಕ್ಕಿಂತ ಹೆಚ್ಚು ಪ್ರೀತಿಯನ್ನಿಟ್ಟುಕೊಂಡಿರುವುದನ್ನು ಕಾಣಬಹುದು. ಗೌಡ ನೀನು ತೆಪ್ಪಗೆ ನಮ್ಮನೇಲಿ ಅಡುಗೆ ಮಾಡ್ಕೊಂಡಿದ್ದುಬಿಡು. ನಿನ್ಗಂಡನ್ನ ನಾನ್ ವಿಚಾರಿಸ್ಕೋತೀನಿ" ಎಂದು ಹೇಳಿದಾಗ ಅವಳು ಇನ್ನಿಲ್ಲಿದ್ದರೆ ಏನಾಗುತ್ತದೆಂದು ತನ್ನ ಮನೆಗೆ ಹಿಂದಿರುಗುತ್ತಾಳೆ. ಅಷ್ಟರಲ್ಲಿ ಚೆನ್ನಿ ಕಣ್ಣುಬಿಟ್ಟು ಹಸು ಇಡ್ಕೊಂಡು ಬಂದೆಯಾ; ಅದೆಲ್ಲಿದೆ, ಅವ್ವ?' ಎಂದು ಕಿರಿಚಿಕೊಂಡಳು. "ನನ್ನ ಮುದ್ದು ಹಸು, ನನ್ನ ತುಂಗೆ ಎಲ್ಲವ್ವ? ' ಎಂದು ಗೋಳ್ಗರೆಯಲಾರಂಭಿಸಿದಳು. "ಅಳ್ಬೇಡ, ಕಂದ. ಇನ್ನೊಂದು ಹಸು ತರ್ತೀನಿ" ಎಂದಾಗ 'ನನ್ನ ತುಂಗಭದ್ರನೇ ಬೇಕು. ಅಜ್ಜಿ ಕೊಟ್ಟ ಹಸೂನೇ ಬೇಕು' ಎನುತ್ತಾಳೆ. ಅಜ್ಜಿ ಕೊಟ್ಟ ವಸ್ತುವಿನ ಮೇಲಿರುವ ಪ್ರೀತಿ ಅರಿವಾಗುತ್ತದೆ. ನಿಂಗಮ್ಮ ಲಿಂಗಯ್ಯನ ಜೊತೆ ಮಾತನಾಡುತ್ತಿದ್ದುದ್ದನ್ನು ನೋಡಿದ ಕಾಡಯ್ಯ 'ಲೇ, ಅವನ ಜತೇಲಿ ಏನ್ಮಾಡ್ತಿದ್ದೆ. ಹಾದರಗಿತ್ತಿ?' ಎಂದು ಹೆಂಡತಿಯ ಕುರುಳು ಹಿಡಿದು ದರದರನೆ ಎಳೆಯುತ್ತ ಬೆನ್ನ ಮೇಲೆ ಗುದ್ದಿದ. 'ಬಂದ ಕೂಡಲೇ ಊಟ ಹಾಕ್ದೆ ಏನೆನೂ ಹರಟ್ತಾ ಇದ್ದೀಯೆ ಲೌಡಿ' ಎಂದು ಹಲ್ಲು ಕಡಿದನು. ಸಾಮಾನಿರಲಿಲ್ಲ, ಅಡುಗೆ ಮಾಡ್ಲಿಲ್ಲ!' ಬೆಳಗ್ಗೆಯಿಂದ ಕೆಲಸಕ್ಕೆ ಹೋಗ್ಲಿಲ್ಲ?' 'ಮಗುವಿಗೆ ಜ್ವರ, ಹೋಗ್ಲಿಲ್ಲ' ಎನ್ನುತ್ತಿರುವಾಗ ಚೆನ್ನಿ 'ಅವ್ವ, ನನ್ನ ಹಸು ಎಲ್ಲಿ? ಅಪ್ಪ ಹೊಡೀತಾನೆ' ಎಂದು ಕೂಗಿಕೊಂಡಳು. ನಿಂಗಮ್ಮ ಗಂಡ ಕುಡಿದು ಬಂದು ಎಷ್ಟೇ ಬೈಯ್ದು ಹೊಡಿದರು ಅದನ್ನೆಲ್ಲ ಸಹಿಸಿಕೊಂಡು ಮಗಳಿಗೆ ಬೈಯ್ಯುವಾಗ ನನ್ನೊಬ್ಬಳೆ ಮಗಳು ನನ್ನ ಜೀವ ಅವಳಿಗೇನೂ ಅನ್ನಬೇಡ, ಬೇಕಾದರೆ ನನಗೆ ಎಷ್ಟು ಬೇಕಾದರೂ ಹೊಡೆದು ಸಾಯಿಸಿಬಿಡು' ಎಂದು ಹೇಳುತ್ತಾಳೆ. ಚೆನ್ನಿ 'ಅವ್ವ, ನನ್ನ ಹಸು ಎಲ್ಲವ್ವ? ಅದರ ಜತೇಲಿ ನಾನೂ ಹೋಗ್ತೀನವ್ವ, ಅಪ್ಪ ಕುಡಿದು ಬಂದವ್ನೆ

---

೧. ದೇಜಗೌ, 'ದೇವರ ಮಗು ಮತ್ತು ಇತರ ಕಥೆಗಳು : ಬಲಿ, ಪುಟ. ೩.

ಕಣವ್ವ' ಎಂದು ಚೆನ್ನಿ ಕಣ್ಣು ಬಿಟ್ಟು ಅವನ ಕಡೆಗೆ ನೋಡಿದಳು. ಕಾಡಯ್ಯ ಕೋಪಾರೂಢನಾಗಿ, ಹೆಂಡತಿಯನ್ನು ಕೈ ಹಿಡಿದೆಳೆದು ಪಕ್ಕಕ್ಕೆ ಉರುಳಿಸಿದ. ಮಗಳನ್ನು ಮೇಲಕ್ಕೆತ್ತಿ 'ನೀನು ಚೋಟುದ್ದ ಇದ್ದೀಯೆ. ನೀನೂ ನನ್ನನ್ನ ಆಡ್ಕೋತೀಯ? ಎಂದು ಕೂಗಿ, ಕೆಳಕ್ಕೆ ಬೀಸಾಡಿದನು. ಮಗುವಿನ ತಲೆ ಗೋಡೆಗೆ ಬಡಿಯಿತು. 'ಅವ್ವ ಸತ್ತನಲ್ಲೆ, ನನ್ನ ಹ.....ಸು.....ಎ...ಲ್ಲೆ? ತುಂಗೇ...? ಎಂದು ಚೆನ್ನಿ ಆ ನೋವಿನಲ್ಲಿ ತೊದಲಿದಳು. ತುಂಗಭದ್ರಾ ನೆನೆದು 'ಅಯ್ಯೋ ನನಗಿನ್ನಾರು ಗತಿ? ಸಾಕು ಮಾಡಪ್ಪ, ದೇವರೆ, ನನ್ನೂ ನಿನ್ಪಾದಕ್ಕೆ ಕರಕೋಪ್ಪ' ಎಂದು ನಿಂಗಮ್ಮ ಎದೆ ಬಡಿದುಕೊಂಡಳು.

ಕಾಡಯ್ಯ ಕುಡಿತದ ಅಮಲಿನಲ್ಲಿದ್ದಾಗ ತಾನು ಏನು ಮಾಡಿದ್ದೆನೆಂದು ನೋಡುವಷ್ಟು ತಾಳ್ಮೆ ಆತನಲ್ಲಿರುವುದಿಲ್ಲ. ಕುಡಿತ ಮನುಷ್ಯನ ಕೈಯಲ್ಲಿ ಏನೆಲ್ಲ ಮಾಡಿಸುತ್ತದೆ ಅಲ್ವೆ

ಹೀಗೆ ಕಥೆಯನ್ನು ಬಹಳ ರೋಚಕವಾಗಿ ತರುವಲ್ಲಿ ಯಶಸ್ವಿಯಾಗಿದ್ದಾರೆ. ಈ ಕಥೆಯಲ್ಲಿ ಮುಖ್ಯವಸ್ತು ಕುಟುಂಬದ ಯಜಮಾನದ ಕುಡಿತದ ಭೀಕರ ಪರಿಣಾಮವೇ ಆಗಿದೆ. ಈ ಕಥೆಯಲ್ಲಿ ಗೌಡನ ಸ್ವಾರ್ಥ, ಗುಪ್ತಕಾಮ, ನಿಂಗವ್ವನ ಮೈದುನನ ವಿವೇಕ. ಮೂರ್ಖತನ ಹೀಗೆ ಬೇರೆ ಬೇರೆ ಆಯಾಮಗಳನ್ನು ಪಡೆಯುತ್ತದೆ. ಈ ಕಥೆಯಲ್ಲಿ ಮುಖ್ಯವಾಗಿ ದೇಜಗೌ ಅವರ ಭಾವುಕತೆಯೇ ಒಂದು ರೀತಿಯಲ್ಲಿ ಕಲಾತ್ಮಕವಾಗಿ ಮೂಡಿ ಬಂದಿದೆ ಎನ್ನಬಹುದು.

**'ದೇವರ ಮಗು':** ಇದು ಸಂಕಲನದ ಶೀರ್ಷಿಕೆಯೂ ಹೌದು. ರೀಡರ್ಸ್ ಡೈಜಸ್ಟ್‌ನಲ್ಲಿ ಪ್ರಕಟವಾಗಿದ್ದ ಕಥೆಯೊಂದರ ನೆನಪಿನಲ್ಲಿ ನೆಪವಾಗಿರಿಸಿಕೊಂಡು ಬರೆದ ಕಥೆ ಇದು. ಇಲ್ಲಿ ಬರುವ ವಸ್ತು ಮುದ್ದು ಮಗು ದೇವರಿತ್ತ ಮಗುವನ್ನು ಆ ದೇವರೇ ಸೆಳೆದುಕೊಂಡ ದುರಂತ. ಭಾವುಕತೆ ಈ ಕತೆಯ ಕಥಾವಸ್ತು. ದೇಜಗೌ ಅವರ ವ್ಯಕ್ತಿತ್ವಕ್ಕೆ ಅಂಟಿಕೊಂಡಿರುವ ಭಾವುಕತೆ ಈ ಕಥೆಯಲ್ಲಿ ಎದ್ದುಕಾಣುತ್ತದೆ.

**ಪಾತ್ರಗಳು:** ಕೆಂಪರಾಜ್ ದೇವಗೆರೆಯ ಮಾರ್ಕೆಟ್ ಚೌಕದಲ್ಲಿ ಲೇವಾದೇವಿ ವ್ಯವಹಾರದ ಬ್ಯಾಂಕೊಂದನ್ನು ನಡೆಸುತ್ತಿದ್ದರು. ಕೆಂಪರಾಜ್ ಪತ್ನಿ. ಮೂವರು ಹೆಣ್ಣು ಮಕ್ಕಳು ಮೊದಲನೆಯವಳು ಲತಾ (ಹತ್ತು ವರ್ಷ) ಎರಡನೆಯವಳು ಲಲಿತ (ಎಂಟು ವರ್ಷ). ಮೂರನೆಯವಳು ಲಸಿತ (ಲಸ್ಸಿ, ಆರು ವರ್ಷ).

ಕೆಂಪರಾಜ್ ಪತ್ನಿಗೆ ಮೊದಲೆರಡು ಹೆಣ್ಣುಮಕ್ಕಳಾಗಿ ಮೂರನೆಯ ಮಗು ಗಂಡು ಮಗುವಾಗುತ್ತದೆಂಬ ಆಸೆ ಇಟ್ಟುಕೊಂಡಿರುವಾಗ ಆ ಮಗುವು ಹೆಣ್ಣುಮಗುವೆ ಆಗುತ್ತದೆ. ಆಕೆಗೆ ದುಃಖವಾಗುತ್ತದೆ. ಪತಿ ಸಮಾಧಾನಪಡಿಸಿ ನೆಹ್ರೂ ಅವರಿಗೆ ಗಂಡು ಸಂತಾನವಿತ್ತೆ? ಗಂಡುಮಗ ಸಾಧಿಸದಿದ್ದುದನ್ನು ಅವರ

ಹೆಣ್ಣು ಮಗಳು ಸಾಧಿಸಿ ನೆಹ್ರೂ ವಂಶಕ್ಕೆ ಕೀರ್ತಿ ತರಲಿಲ್ಲವೇ? ಚಿಂತಿಸಬೇಡ' ಎಂದು ಸಮಾಧಾನಪಡಿಸುವುದು. ಇಲ್ಲಿ ಹೆಣ್ಣು ಬಂದು ಮತ್ತೆ ಮೂರನೆಯದು ಹೆಣ್ಣಾಯಿತಲ್ಲ ಎಂದು ಕೊರಗುವುದನ್ನು ನೋಡಬಹುದು. ಕೆಂಪರಾಜ್ ಗಂಡುಮಗುವಲ್ಲದೆ ಹೆಣ್ಣು ಮಗುವಾದರೂ ಗಂಡುಮಗು ಸಾಧಿಸುವುದನ್ನು ಹೆಣ್ಣುಮಗಳು ಸಾಧಿಸುತ್ತಾಳೆಂಬ ಭರವಸೆಯನ್ನಿಟ್ಟುಕೊಂಡಿರುವುದನ್ನು ಗಮನಿಸಿದರೆ ಆತನಲ್ಲಿ ಹೆಣ್ಣುಮಕ್ಕಳ ಮೇಲಿರುವ ಪ್ರೀತಿ, ಗೌರವಾದರಗಳು ಕಂಡುಬರುತ್ತದೆ.

ಕೆಂಪರಾಜ್ ಮನೆಯಲ್ಲಿ ಯಾರೂ ಕೆಟ್ಟ ಮಾತನಾಡಕೂಡದೆಂದು ಕರಾರು ಮಾಡಿಕೊಂಡದ್ದು ಕೆಟ್ಟಮಾತಿಗೆ ಐದು ಪೈಸೆ ಜುಲ್ಮಾನೆ ಕೊಡಬೇಕಾಗಿತ್ತು. ಜುಲ್ಮಾನೆ ಹಣ ಹುಂಡಿಗೆ ಸೇರುತ್ತಿತ್ತು. ಡಬ್ಬ ತುಂಬಿದ ನಂತರ ಆ ಮೊತ್ತವನ್ನು ಅನಾಥ ಶಿಶುವಿಹಾರಗಳಿಗೆ ನೀಡಲಾಗುತ್ತಿತ್ತು. ಇದರಿಂದ ಅನಾಥ ಮಕ್ಕಳಿಗೆ ಸಹಾಯ ಮಾಡುವುದು. ಮನೆಯಲ್ಲಿ ಕೆಟ್ಟ ಮಾತುಗಳನ್ನಾಡದೆ ಒಳ್ಳೆಯ ಮಾತುಗಳಿಂದ ಮನೆಯಲ್ಲಿ ಎಲ್ಲರೂ ಸಂತೋಷದಿಂದಿರುವಂತಾಗುತ್ತಿತ್ತು.

ಅಕ್ಕಪಕ್ಕದ ಮನೆಯವರಿಗೂ ಲಸ್ಸಿಯನ್ನು ಕಂಡರೆ ಪ್ರೀತಿ. ಅವಳು ಬರುವುದನ್ನೇ ಆ ಮನೆಯ ಮಕ್ಕಳು ಕಾಯುತ್ತಿದ್ದರು. 'ಜೂಗೆ ಹೋಗಿದ್ದೊ, ನವಿಲು ನೋಡಿದೆ. ಅದಕ್ಕೆ ಕೋಗಿಲೆಯ ದನಿ ಇರಬಾರದಿತ್ತೆ? ಗುಲಾಬಿ ಹೂವು ಎಷ್ಟು ಚಂದ. ಅದರ ಸುತ್ತ ಮುಳ್ಳಿರಬಾರದಿತ್ತು' ಮಾವು ಅದೆಷ್ಟು ಮಧುರ? ವಾಟೆಯೇಕೆ ಅಷ್ಟು ದಪ್ಪ? ಎಂದೆಲ್ಲ ಅವಳವರನ್ನು ಪ್ರಶ್ನಿಸುತ್ತಿದ್ದಳಂತೆ. "ನೀವು ಪುಣ್ಯವತಿಯಮ್ಮ' ಎಂಥ ಬುದ್ಧಿವಂತಿಕೆಯ್ನು ಪಡೆದಿದ್ದೀರಿ? ಪಾದರಸದಂತೆ ಚುರುಕು. ಕೈಕಾಲು ಮೂಡಿದ ಗುಲಾಬಿಯಂತೆ, ಸುಂದರವಾದ ಚಿಟ್ಟೆಯಂತೆ ಓಡಾಡುತ್ತಾಳೆ. ಅವಳ ಆಟಪಾಠಗಳನ್ನು ನೋಡಿದರೆ ಅವಳೊಂದು ಡೈನಮೋ ಎನಿಸುತ್ತದೆ, ಅವಳು ಹಾಕುವ ಪ್ರಶ್ನೆಗಳನ್ನು ಕೇಳಿದರೆ ಸರಸ್ವತಿಯೇ ಅವಳ ನಾಲಿಗೆಯಲ್ಲಿ ವಾಸಿಸುತ್ತಿದ್ದಾಳೆಯೇ ಎಂದು ತೋರುತ್ತದೆ"[೧] ಎಂದು ಅಕ್ಕಪಕ್ಕದ ಮನೆಯವರು ಕೇಳುತ್ತಿದ್ದರು.

ಲಸ್ಸಿಗೆ ನಾಲ್ಕು ವರ್ಷ ತುಂಬುತ್ತಿದ್ದಂತೆ ಮನೆಗೆ ಹತ್ತಿರವಿದ್ದ ಶಾಲೆಗೆ ಕರೆದೊಯ್ಯುತ್ತಾರೆ. ಅವಳನ್ನು ಕಳುಹಿಸಿಕೊಡಲು ಪಪ್ಪಿ, ಅಭಿಮನ್ಯು ಬಂದಿದ್ದವು. ಕಾರಿನಿಂದಳಿಯುತ್ತಿದ್ದಂತೆ. ಶಾಲೆಯ ಮಕ್ಕಳು ಅವಳ ಸುತ್ತ ಮುತ್ತಿಕೊಂಡರು. ಬೇರೆ ಕಡೆಯಿಂದ ಬಂದ ಮರಿಯನ್ನು ಹಿಂಡಿನ ಜಿಂಕೆಮರಿಗಳು ಮೂಸುವಂತೆ, ನೆಕ್ಕುವಂತೆ ಅಲ್ಲಿಯ ಮಕ್ಕಳು ಲಸ್ಸಿಯ ಕೆನ್ನೆಯನ್ನು ಸವರುತ್ತಿದ್ದರು. ಕೂದಲನ್ನು

---

೧. ದೇಜಗೌ, 'ದೇವರ ಮಗು ಮತ್ತು ಇತರ ಕಥೆಗಳು : ದೇವರ ಮಗು, ಪುಟ. ೮.

ನೇವರಿಸುತ್ತಿದ್ದರು. ಉಪಾಧ್ಯಾಯಿನಿ ಬಂದು ಲಸ್ಸಿಯನ್ನೆತ್ತಿಕೊಂಡು ಮುದ್ದಾಡಿ ಬಿಸ್ಕತ್ತು ಕೊಟ್ಟು ಲಲ್ಲೆಗರೆದಳು. ಲಸ್ಸಿಯನ್ನು ಯಾರೇ ನೋಡಿದರೂ ಅವಳನ್ನು ಮುದ್ದಿಸುವಾಗೆ ಇದ್ದಳು.

ಬೇಸಗೆಯ ಕಾಲವಾದ್ದರಿಂದ ಒಂದು ರಾತ್ರಿ ತಾರಸಿಯ ಮೇಲೆ ಮಲಗುವುದೆಂದು ಲಸ್ಸಿ ಹಟ ಹಿಡಿಯುತ್ತಾಳೆ. ಗಗನವನ್ನೆ ದಿಟ್ಟಿಸುತ್ತ 'ಅಬ್ಬ, ಎಷ್ಟೊಂದು ಚುಕ್ಕೆಗಳಪ್ಪ ಅಲ್ಲಿ. ಅವು ಕರೆದರೆ ನಮ್ಮ ಬಳಿ ಬರುತ್ತವೆಯೇ?' 'ನಾನೇ ಅವುಗಳಿರುವಲ್ಲಿಗೆ ಹೋದರೆ?' ಅದು ಸಾಧ್ಯವಿಲ್ಲ. "ಅವು ಕೈಗೆ ಸಿಕ್ಕಿದರೆ ಹಣೆಗೆ ಹಚ್ಚಿಕೊಳ್ಳಬಹುದಲ್ಲವೆ? ಆಗ ಕತ್ತಲೆಯ ಕೋಣೆಯಲ್ಲಿಯೂ ಬೆಳಕು ಚೆಲ್ಲುತ್ತದೆ"[೧] ಅಲ್ಲಿಗೆ ಯಾರು ಹೋಗಲಾರರು. 'ಸತ್ತವರು ನಕ್ಷತ್ರಗಳಾಗುತ್ತಾ-ರಂತಮ್ಮ 'ಯಾರೇ ಹೇಳಿದವರು?' 'ನನ್ನ ತರಗತಿಯ ಸಂಗಾತಿ ತಾರೆ. 'ಅದೆಲ್ಲ ಕಟ್ಟುಕತೆ, ಇಲ್ಲಿ ಲಸ್ಸಿಯ ಮಾತುಗಳ ನೋಡಿದರೆ ವಯಸ್ಸಿಗೂ ಮೀರಿದ ಪ್ರಶ್ನೆಗಳು ಆ ಚಿಕ್ಕಮನಸ್ಸಿನಲ್ಲಿ ಏನೆಲ್ಲ ಪ್ರಶ್ನೆಗಳು ಹುಟ್ಟುತ್ತಿದೆ ಎಂದೆನಿಸುತ್ತದೆ.

ಏಳೆಂಟು ದಿವಸಗಳಿಂದ ಲಸ್ಸಿ ಶಾಲೆಗೆ ಹೋಗಿರಲಿಲ್ಲವಾದ್ದರಿಂದ ಅವಳ ತರಗತಿಯ ಉಪಾಧ್ಯಾಯಿನಿಯೇ ಅವಳನ್ನು ನೋಡುವ ಸಲುವಾಗಿ ಮನೆಗೆ ಬರುತ್ತಾರೆ. 'ಐದಾರು ವರ್ಷಕ್ಕೆ ನಿಮ್ಮ ಮಗು ಅದೆಂಥ ಜಾಣೆ' ಅವಳು ಕೇಳುವ ಪ್ರಶ್ನೆಗಳಿಗೆ ನಾವೆಲ್ಲ ಡಂಗಾಗುತ್ತೇವೆ. ಮೇಡಂ, ಗುಲಾಬಿಯಲ್ಲಿ ಹಲವು ಬಣ್ಣಗಳಿವೆಯಲ್ಲ; ಏಕೆ?' ಎಂದು ಕೇಳುತ್ತಾಳೆ. 'ಕೋಳಿ ಮೊಟ್ಟೆಗಳ ಬಣ್ಣ ಒಂದೆಯಾದರೂ ಹುಟ್ಟುವ ಮರಿಗಳ ಬಣ್ಣ ಬೇರೆ ಬೇರೆಯಲ್ಲ ಏಕೆ? ಏನುತ್ತರ ಹೇಳಿದರೂ ಅವಳಿಗೆ ತೃಪ್ತಿಯಾಗೊಲ್ಲ. "ಕೊನೆಗೆ ಅದೆಲ್ಲ ಭಗವದಿಚ್ಛೆ"[೨] ಎಂದು ಹೇಳಿಬಿಡುತ್ತೇನೆ. ಇಂಥ ಮಗಳನ್ನು ಪಡೆದದ್ದೇ ನಿಮ್ಮ ಪುಣ್ಯ ಎಂದು ಉಪಾಧ್ಯಾಯಿನಿ ಲಸ್ಸಿಯನ್ನು ಹೊಗಳಿ ವನಮಹೋತ್ಸವಕ್ಕೆ ಬಂದು ಬಿಡು ಎಂದು ಹೇಳಿ ಹೋಗುತ್ತಾರೆ. ವನಮಹೋತ್ಸವ ದಿನ ಶಾಲೆಯಿಂದ ಬರುವಾಗ ಅವಳೊಂದು ಎರಡೂವರೆ ಅಡಿ ಉದ್ದದ ಕಡ್ಡಿಯನ್ನು ಹಿಡಿದುಕೊಂಡು ಮನೆಗೆ ಬಂದಳು. ತನ್ನ ಮಲಗುಕೋಣೆಯ ಕಿಟಕಿಯ ಬಳಿ ಅದನ್ನು ನೆಡಬೇಕೆಂದವಳು ಹಟಮಾಡಿದಳು. 'ಎಲೆಯಿಲ್ಲ, ಚಿಗುರಿಲ್ಲ. ಬೇರು ಸಹ ಸರಿಯಾಗಿ ಬಂದಿಲ್ಲ. ನೆಟ್ಟರೆ ಪ್ರಯೋಜನವೇನು?' ಎಂದು ಅಪ್ಪ ಹೇಳಿದರೂ ಅವಳು ಹಟ ಮಾಡಿ ಪಿಕಾಸಿ ತಂದಳು. ಅಪ್ಪ ಗುಳಿ ತೋಡಿದರು. ಅವಳೇ ಆ ಕಡ್ಡಿಯನ್ನು ನೆಟ್ಟಳು, ನೀರು ಹುಯ್ದಳು. ಹಾಸುಗೆಯಿಂದೆದ್ದ ಕೂಡಲೇ ಅವಳು ಕಡ್ಡಿಯ ಬಳಿಗೆ

---

೧. ದೇಜಗೌ, 'ದೇವರ ಮಗು ಮತ್ತು ಇತರ ಕಥೆಗಳು : ದೇವರ ಮಗು, ಪುಟ. ೧೦.
೨. ಅದೇ, ಪುಟ. ೧೧.

ಓಡುತ್ತಿದ್ದಳು. ತುದಿಯಿಂದ ತಾಳಿನವರೆಗೆ ಅದನ್ನು ಸವರುತ್ತಿದ್ದಳು. ನೀರು ಹುಯ್ಯುತ್ತಿದ್ದಳು. "ಓ ರವಿದೇವ, ಇವಳು ನನ್ನ ಮುದ್ದು ಕಂದ, ಒಣಗಿಸಬೇಡಪ್ಪ, ಇವಳು ಬಿಡುವ ಮೊದಲ ಹೂವನ್ನು ನಿನಗರ್ಪಿಸುತ್ತೇನೆ"[೧] ಎಂದು ಪ್ರಾರ್ಥಿಸುತ್ತಿದ್ದಳು. ಇದನ್ನು ಗಮನಿಸಿದರೆ ಬರೀ ಕಡ್ಡಿಯನ್ನೆಟ್ಟು ಅದು ಚಿಗುರಿ, ಹೂಬಿಡುತ್ತದೆ ಎಂಬ ನಂಬಿಕೆಯನ್ನಿಟ್ಟುಕೊಂಡಿದ್ದಳು. ಜೀವನದಲ್ಲಿ ನಂಬಿಕೆಯೇ ಬಹಳ ಮುಖ್ಯ ಆಶಾಕಿರಣವೆಂದು ತಿಳಿದುಬರುತ್ತದೆ. ಹಬ್ಬ ಹರಿದಿನ ಬಂತೆಂದರೆ ಕುಂಕುಮ, ಅರಿಸಿನ ಹಚ್ಚಿ, ಕರ್ಪೂರ ಉರಿಸಿ ಪೂಜಿಸುತ್ತಿದ್ದಳು. ಅದಕ್ಕವಳಿಟ್ಟ ಹೆಸರು 'ಶಕುಂತಲಾ'. ಆ ಕಡ್ಡಿಯಲ್ಲಿ ಚಿನ್ನದ ಮುಲಾಮು ಸವರಿದಂತೆ ಮಿರುಗುತ್ತಿದ್ದ ಮೂರ್ನಾಲ್ಕು ಬೇಳೆಯಗುಲದ ಎಲೆಗಳು ಕಣ್ಣಿಗೆ ಬಿದ್ದುವು. ಲಸ್ಸಿ ಕೈ ಚಪ್ಪಾಳೆ ತಟ್ಟಿಕೊಂಡು 'ಜೀವ ಬಂತು ಬಾಲೆಗೆ' ಎಂದು ಕುಣಿದದ್ದು ಕುಣಿದದ್ದೆ, ಅವಳ ನಂಬಿಕೆ ನಿಜವಾಯಿತು.

ಒಂದು ದಿನ ಲತಾ ಕತ್ತರಕ ಯಂತ್ರದಿಂದ ಹುಲ್ಲು ಕತ್ತರಿಸಬೇಕಾದರೆ ಕತ್ತರಕದ ಚಾಚು ಮೊಳೆಯೊಂದು ಶಕುಂತಲೆಗೆ ತಗುಲಿತು. ಒಂದೆರಡು ಎಲೆ ಮುರಿದುಬಿದ್ದುವು. ಲಸ್ಸಿ 'ಅಯ್ಯೋ, ನನ್ನ ಶಕುಂತಲೆಗೆ ನೋವಾಯಿತಲ್ಲೆ' ಎಂದು ಶಕುಂತಲೆಯನ್ನು ತಬ್ಬಿಕೊಂಡು ಅಳಲಾರಂಭಿಸಿದಳು. ಲಸ್ಸಿ ಎಲೆ ಬಿದ್ದ ಜಾಗದಲ್ಲಿ ಗಿಡದ ಸುತ್ತ ಕೆಮ್ಮಣ್ಣು ಬಟ್ಟೆಕಟ್ಟಿ, ಮುದ್ದಿಸಿ, 'ಈಗ ಮಲಗಿಕೋ ನಿದ್ದೆಮಾಡು, ನಾಳೆಯ ಹೊತ್ತಿಗೆ ಸರಿಹೋಗುತ್ತದೆ' ಎಂದು ಮುತ್ತಿಕ್ಕಿ ತಾಯಿಯೊಬ್ಬಳು ತನ್ನ ಮಗುವಿಗೆ ನೋವಾದರೆ ಹೇಗೆ ಸಂತೈಸುತ್ತಾಳೋ ಹಾಗೆಯೇ ಶಕುಂತಲೆಯನ್ನು ಸಂತೈಸಿದಳು. ಅದರ ಎಲೆ ಮೊಗ್ಗುಗಳನ್ನು ನೋಡಿದಾಗ ದಾಸವಾಳವೆಂದು ಖಚಿತವಾಯಿತು.

ಲಸ್ಸಿಯ ಆರನೆಯ ಹುಟ್ಟುಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಲಸಿಕ ಸರ್ವಾಲಂಕಾರ ಭೂಷಿತೆಯಾಗಿ ಶಕುಂತಲೆಯ ಪಕ್ಕದಲ್ಲಿಯೇ ಕುರ್ಚಿಯಲ್ಲಿ ಕುಳಿತ್ತಿದ್ದಳು. 'ಏನು ಪ್ರಸನ್ನತೆ, ಎಂಥ ಗಾಂಭೀರ್ಯ, ಎಂಥ ತೇಜಸ್ಸು. ಸಾಕ್ಷತ್ ಲಕ್ಷೀಸರಸ್ವತಿಯರೆ ಒಂದಾಗಿ ಇವಳ ಮೈಯಲ್ಲಿ ಸೇರಿಕೊಂಡಿರುವಂತೆ ತೋರುತ್ತದೆ ಎಂದು ಬಂದವರೆಲ್ಲರೂ ಹೇಳಿಕೊಳ್ಳುತ್ತಿದ್ದರು.

ಮುಂದಿನ ಐದಾರು ತಿಂಗಳಿನಲ್ಲೊಂದು ದಿನ ಶಾಲೆಯಿಂದ ಬರುತ್ತಿದ್ದಂತೆಯೇ 'ನನಗೇಕೋ ಸುಸ್ತಾಗುತ್ತಿದೆ. ಅಮ್ಮ ಎಂದು ಹಾಸಿಗೆ ಹಿಡಿದಳು. 'ಅಗೋ ಆಗಸದಲ್ಲಿ ನಕ್ಷತ್ರ, ನನ್ನನ್ನು ಕರೆಯುತ್ತಿದೆ' ಎಂದು ಕನವರಿಸುತ್ತಿದ್ದಳು.

---

೧. ದೇಜಗೌ, 'ದೇವರ ಮಗು ಮತ್ತು ಇತರ ಕಥೆಗಳು : ದೇವರ ಮಗು, ಪುಟ. ೧೧.

ಕೇಳಿದಾಗ 'ನಾನು ಪಪ್ಪಿ ಸಮೇತ ನಕ್ಷತ್ರಗಳೊಡನೆ ಆಟವಾಡುತ್ತಿದ್ದೆ ಅಮ್ಮ' ಎಂದಳು. ಸಾವಿನ ಮುನ್ಸೂಚನೆ ಇರಬೇಕು. ಜ್ವರ ಬಂದಿತ್ತು. ವೈದ್ಯರು ಬಂದು ಮದ್ದು ಕೊಟ್ಟರೂ ಜ್ವರ ಬಿಟ್ಟುಬಿಟ್ಟು ಬರುತ್ತಿತ್ತು. ಜ್ವರದಲ್ಲಿಯೂ ಶಕುಂತಲೆಯ ಬಳಿಗೆ ಹೋಗಿ ಅವಳನ್ನು ಮುದ್ದಾಡಿ ಬರುತ್ತಿದ್ದಳು. ಊಟ ತಿಂಡಿಗಳ ಆಸೆ ಇಲ್ಲದೆ ಪಪ್ಪಿಯೂ ಲಸಿಯ ಪಾದದ ಬಳಿ ಬಿದ್ದಿರುತ್ತಿತ್ತು. ಲಸ್ಸಿಗೆ ಎದೆನೋವು ಶುರುವಾಗಿತ್ತು. ಎದೆಯಲ್ಲಿ ಕೆಟ್ಟ ಹುಣ್ಣು ಇತ್ತು. ಮಕ್ಕಳನ್ನು ಪಡೆದು ನೋವನ್ನು ಅನುಭವಿಸುವುದಕ್ಕಿಂತ ಬಂಜೆಯಾಗಿದ್ದರೆ ಚೆನ್ನಾಗಿರುತ್ತಿತ್ತು ಎಂದು ಮಾತಾಡಿಕೊಂಡರು.

ಲಸ್ಸಿಯನ್ನು ಮದ್ರಾಸಿನ ಅಪೋಲೊ ಆಸ್ಪತ್ರೆಗೆ ಕೊಂಡೊಯ್ಯಲಾಯಿತು. ಸಂಜೆಯ ಹೊತ್ತಿಗೆ ಅವಳ ಪ್ರಜ್ಞೆ ಚೇತರಿಸಿಕೊಂಡಳು. ಅಮ್ಮ ಅಳುತ್ತಿದ್ದದ್ದನ್ನು ನೋಡಿ. 'ಅಳಬೇಡಮ್ಮ, ನನಗೇನಾಗಿದೆ, ನನ್ನಾಣೆ ಅಳಬೇಡಮ್ಮ' ಎಂದಳು. ಹಿಂದೆಂದೂ ಕಾಣದ ಯಾವುದೋ ಲೋಕಕ್ಕೆ ಹೋಗಿ ಬಂದೆನ್ಮ್ಮ ಅದೆಷ್ಟು ಸುಂದರ! ಮನಮೋಹಕ! ಅದೊಂದು ನಕ್ಷತ್ರ ಲೋಕ! ನಾನು ಅವುಗಳಲ್ಲೊಂದಾಗಿದ್ದೆ. 'ಬೇಡ ಮಗು, ದಮ್ಮಯ್ಯ, ಹಾಗೆಲ್ಲ ಹೇಳಬೇಡ', 'ಇಲ್ಲಮ್ಮ ಅಪ್ಪ ಏಕೆ ಹಾಗೆ ನಿಂತಿದ್ದಾರೆ. ಲತಾಕ್ಕ ಲಲಿತಕ್ಕರೆಲ್ಲಿ? ಪಪ್ಪಿ? ಅಭಿ? ಎಂದು ಕೇಳಿದಾಗ ತಂದೆ ಮೌನವಾಗಿ ಅವಳ ಕೈ ಹಿಡಿದುಕೊಳ್ಳುತ್ತಾರೆ.

ಮದ್ರಾಸಿನಿಂದ ಮನೆಗೆ ಹಿಂದಿರುಗಿದ ನಂತರವೂ ಪ್ರತಿದಿನ ಅವಳಿಗೆ ರಾಸಾಯನಿಕ ಔಷಧೋಪಚಾರ ನಡೆಯುತ್ತಿತ್ತು. ಸಾವಿನ ಬಗ್ಗೆಯೂ ಶಂಕೆ ಮೂಡಿದ್ದಿರಬಹುದು. ಆದರೆ ಆ ಬಗ್ಗೆ ಅವಳೆಂದೂ ಪ್ರಶ್ನಿಸಲಿಲ್ಲ. ಹಾಗೆಲ್ಲ ಕೇಳಿದರೆ ನನಗೆ ನೋವಾಗಬಹುದೆಂದವಳು ತಿಳಿದಿದ್ದಂತೆ ಅವಳ ನೇತ್ರ ಭಾವದಿಂದಲೇ ಅರ್ಥವಾಗುತ್ತಿತ್ತು. ತನಗೆ ತೊಂದರೆ ಆದರೂ ಸುತ್ತಮುತ್ತಣವರಿಗೆ ತೊಂದರೆಯಾಗಬಾರದೆಂದು ಅವಳು ನಟಿಸುತ್ತಿದ್ದಿರಬೇಕೆಂದು ತಾಯಿ-ತಂದೆಗೂ ಅರಿವಾಗುತ್ತಿತ್ತು.

ಕೆಲವು ತಿಂಗಳ ವೈದ್ಯೋಪಚಾರದ ನಂತರ ಎದೆಯ ಮೇಲಿನ ಬೊಕ್ಕೆ ತಗ್ಗಿತು. ಅವಳು ಮೊದಲಿನಂತಾದಳು. ಪಪ್ಪ, ಅಭಿಮನ್ಯುಗಳಿಗೂ ಹೊಸ ಚೇತನ ಬಂದಂತಾಗಿ, ಅವಳೊಡನೆ ಓಡಾಡುತ್ತಿದ್ದವು. ಮಬ್ಬು ಕವಿದಿದ್ದ ಮನೆಯಲ್ಲಿ ಮತ್ತೆ ಬೆಳಕು ಹಬ್ಬಿತು. ಮನೆಯಲ್ಲಿ ಆ ಸಂತೋಷವಿದ್ದದ್ದು ಹತ್ತು-ಹದಿನೈದು ದಿನ ಮಾತ್ರ. ಬೊಕ್ಕೆ ಹಿಂದಿಗಿಂತ ದಪ್ಪವಾಯಿತು, ಕೆನ್ನೆಗಳು ಗುಳಿಬಿದ್ದವು; ಕಣ್ಣಿನ ಬಳೆ ಎದ್ದು ಕಾಣುತ್ತಿದ್ದವು. ಮುಖ ಬಿಳಿಚಿಕೊಂಡಿತು. ಇದ್ದಕ್ಕಿದ್ದಂತೆ ಒಂದು ದಿನ ಅಪರಾಹ್ನ ಅಕ್ಕಪಕ್ಕಗಳಲ್ಲಿ ಪಪ್ಪಿ, ಅಭಿಮನ್ಯಗಳನ್ನು ಮಲಗಿಸಿಕೊಂಡಿರುವಾಗಲೇ

ಅವಳು ಮೂರ್ಛೆ ಹೋದಳು. ಅವಳ ಉಸಿರಾಟ ತುಂಬ ನಿಧಾನವಾಯಿತು. ವೈದ್ಯರು ಬಂದು ನಾಡಿಯ ಮಿಡಿತಕ್ಕಾಗಿ ಹುಡುಕಾಡಿದರು. ಅವರ ಮುಖದ ಮೇಲೆ ವಿಷಾದದ ಛಾಯೆ ಸುಳಿಯಿತು. ಎಲ್ಲ ಮುಗಿಯಿತು' ಎಂದರು. 'ಆ ಸುಂದರ ಪುಷ್ಪ ಭೂಮಿಗೆ ಸಲ್ಲದು', ಅದು ತನಗೆ ಬೇಕೆಂದು ದೇವರು ಸೆಳೆದುಕೊಂಡ"[೧] ಎಂದು ಬಂದ ಜನ ನಿಟ್ಟುಸಿರುಗರೆದರು. ಬಂದ ಜನರಿಗೆ ಇಷ್ಟೊಂದು ನೋವನ್ನುಂಟುಮಾಡಿದರೆ ಆಕೆಯ ತಾಯಿ-ತಂದೆಯರಿಗೆ ಎಷ್ಟು ನೋವಾಗಿರಬಹುದಲ್ಲವೇ? ಪಪ್ಪಿಗೆ ಅನ್ನ ನೀರು ಸೇರಲಿಲ್ಲ', ಕೊರಗಿ ಕೊರಗಿ ಹನ್ನೊಂದು ದಿನಗಳಿಗೊಳಗಾಗಿ ಲಸ್ಸಿಯನ್ನು ಹಿಂಬಾಲಿಸಿತು. ಅಭಿಮನ್ಯು ಮಾತ್ರ ಏಕಾಂಗಿಯಾಗಿ ಯಾವಾಗಲೂ ಅನಿತಾಳ ಮಂಚದ ಮೇಲೆ ದೀನನಂತೆ ಕುಳಿತಿರುತ್ತಿತ್ತು.

ಆ ಮನೆಯನ್ನು ಯಾವುದಾದರೂ ಶಾಲೆಗೆ ದಾನಮಾಡಿ, ನಗರದಲ್ಲಿ ಮತ್ತೊಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು, ಲಸ್ಸಿ ಬಳಸುತ್ತಿದ್ದ ಸಾಮಾನುಗಳನ್ನು ದಾನ ಮಾಡಿದೆವು. ದಾಸವಾಳದ ಕಸಿಕಟ್ಟಿದ ಕೊಂಬೆಯೊಂದನ್ನು ಬಾಡಿಗೆ ಮನೆಯ ಮಲಗು ಕೋಣೆಯ ಪಕ್ಕದಲ್ಲಿ ನೆಟ್ಟರು. ದಿನಕ್ಕೆರಡು ಮೂರು ಬಾರಿಯಾದರೂ ಅದನ್ನು ನೋಡುತ್ತಿದ್ದರು. ಮಲಗು ಕೋಣೆಯ ಮೇಜಿನ ಮೇಲೆ ಸದಾಲಂಕೃತವಾದ ಲಸ್ಸಿಯ ಭಾವಚಿತ್ರಕ್ಕೆ ದಾಸವಾಳದ ಹೂವು ಮುಡಿಸುತ್ತಿದ್ದರು. ದೊಡ್ಡ ಮಕ್ಕಳು ಮದುವೆಯಾಗಿ ಗಂಡಂದಿರ ಮನೆಗೆ ಹೋದನಂತರ ಅವರಿಬ್ಬರೇ ಒಬ್ಬರನ್ನೊಬ್ಬರು ನೋಡಿಕೊಂಡು ಕಾಲನೂಕುತ್ತಿದ್ದರು. 'ದೇವರು ಏನಾದರೂ ಕೊಡಲ್ಲಣ್ಣ, ಕೊಡದಿದ್ದರೆ ಬಿಡಲ್ಲಣ್ಣ ಅವನು ಹಾಕಿದ ತಾಳಕ್ಕೆ ನಾವೆಲ್ಲರೂ ಕುಣಿಯಬೇಕು' ಎಂಬಂತಾಯಿತು. ಲಸ್ಸಿಯ ಬಳಿ ಹೋಗುವ ದಿನವನ್ನು ಕಾಯುತ್ತಿದ್ದರು. ದೇವರಿಗೆ ಯಾರು ಪ್ರಿಯರಾಗುತ್ತಾರೋ ಅವರನ್ನು ಚಿಕ್ಕವರು ದೊಡ್ಡವರು ಎನ್ನದೇ ಮೊದಲು ಬರಮಾಡಿಕೊಳ್ಳುತ್ತಾನೆ. ನಂತರ ಅವರ ಹಿಂದೆ ಇಂದಲ್ಲ ನಾಳೆ ಲಸ್ಸಿ ಇರುವ ಜಾಗಕ್ಕೆ ನಾವು ಹೋಗಿ ಸೇರುತ್ತೇವೆಂದೂ ದಿನ ಕಾಯುತ್ತಿದ್ದರು.

'ವಾಲಿಬಾಲಿಗೆ ವಾಲಿದ ಹಳ್ಳಿಯ ಹುಡುಗ': ಹಾರೋಹಳ್ಳಿ ಪುಟ್ಟೇಗೌಡ, ಹೆಂಡತಿ ಇವರಿಬ್ಬರಿಗೆ ಇಬ್ಬರು ಗಂಡುಮಕ್ಕಳು ಹಿರಿಯಮಗ ಮಾದಯ್ಯ, ಕಿರಿಯಮಗ ಲಿಂಗಣ್ಣ, ಇಬ್ಬರು ಹೆಣ್ಣುಮಕ್ಕಳು ಚೆನ್ನರಿಗರೆಯ ಹಿರಿಯಕ್ಕನ ಮಗಳು ಚೆನ್ನಿ. ಕೃಷ್ಣಪ್ಪ ಉಪಾಧ್ಯಾಯರು. ಆರ್ಕೆ ಮೂರ್ತಿಯವರು. ಅವರ ಪತ್ನಿ ಸರಸ್ವತಮ್ಮ ತಿಮ್ಮಪ್ಪ.

---

೧. ದೇಜಗೌ, 'ದೇವರ ಮಗು ಮತ್ತು ಇತರ ಕಥೆಗಳು : ದೇವರ ಮಗು, ಪುಟ. ೧೫.

ಲಿಂಗಣ್ಣನು ಸುಂದರನಗರದ ಪ್ರೌಢಶಾಲೆಯ ಮುಂದೆ ನಿಂತುಕೊಂಡು ಪ್ರೌಢಶಾಲೆಯ ಹುಡುಗರು ಆಡುತ್ತಿದ್ದ ವಾಲಿಬಾಲ್ ಆಟದಲ್ಲಿಯೇ ಲಿಂಗಣ್ಣನ ಮನಸ್ಸು ನಾಟಿದೆ. ಅಪ್ಪನ ಕೂಗು ಕೇಳಿಸುವುದಿಲ್ಲ. ತೋಳು ಹಿಡಿದು ಎಳೆಯುತ್ತಾರೆ. "ಅದೇನ್ಲ ನೋಡೋದು ಓದ್ದೋವು ಅದೇನೋ ಆಡ್ಕೋತಾವೆ. ಅಂಬ್ಲಿ ಕುಡಿಯೋರ್‍ಗೆ ಇದೆಲ್ಲ ಯಾಕ್ ಬಾರ್‍ಲ. 'ಇದ್ನೋಡಿದ್ರೆ ಒಟ್ಟೆ ತುಂಬ್ತದ. ಓದೋರಾಡೋ ಆಟ', ಆಡ್ಕಾಯೋರಾಡೂದಲ್ಲ ಬಾ ಮತ್ತೆ"೧ ಎಂದು ಪುಟ್ಟೇಗೌಡ ಮುಂದೆ ನಡೆಯುತ್ತಾನೆ. ಲಿಂಗಣ್ಣ ಕಾಲುಕಿತ್ತು ಹಾಕುತ್ತ, ಹಿಂದುಹಿಂದಕ್ಕೆ ನೋಡುತ್ತ ಸಾಗುತ್ತಾನೆ. ಹೊಂಡಕ್ಕೆ ಬಿದ್ದ ಹಂದಿ ನೀರನ್ನು ಕಲುಕುವಂತೆ ಲಿಂಗಣ್ಣನ ಮನಸ್ಸನ್ನು ಯೋಚನೆಗಳು ಕದಡುತ್ತವೆ. ಹುಟ್ಟಿದಾರಭ್ಯ ಅವನು ಪಟ್ಟಣದ ಮೋರೆಯನ್ನು ಕಂಡವನಲ್ಲ. ಪಟ್ಟಣದ ಒಂದೊಂದು ದೃಶ್ಯವು ಅವನಲ್ಲಿ ಆಶ್ಚರ್ಯವನ್ನು ಕೆರಳಿಸಿ, ಗಾಬರಿ ಹುಟ್ಟಿಸುತ್ತಿದ್ದುವು. ಅಣ್ಣ, ಅಕ್ಕಂದಿರೊಡನೆ, ಹಳ್ಳಿಯ ತಿಮ್ಮ ಕಾಳಸಣ್ಣ, ಅಕ್ಕನ ಮಗಳು ಚೆನ್ನಿಯರೊಡನೆ, ಕೋಳಿ, ನಾಯಿ, ಕುರಿ, ಮೇಕೆ ಹಸುಗಳೊಡನೆ ದನಕುರಿ ಮೇಕೆಗಾಹಿಗಳೊಡನೆ, ಮರಗಿಡ ಹೊಲಗದ್ದೆಗಳ ಪೈರುಗಳೊಡನೆ ಮಳೆಬಿಸಿಲು ಚಳಿಗಾಳಿಗಳಲ್ಲಿ ಲಿಂಗಣ್ಣ ಹದಿನೈದು ವರ್ಷ ಕಳೆದಿದ್ದನು. ಅಪ್ಪನಿಗೆ ಮೂರೆಕೆರೆ ಹೊಲ; ನಾಲ್ಕಂಕಣ ಹಳೆಯ ಮನೆ ಕೊಟ್ಟಿಗೆ ಮಳೆ ಬಿದ್ದರೆ ಅರೆಹೊಟ್ಟೆ ಊಟ; ಇಲ್ಲ, ಹೊಟ್ಟೆಗೆ ತಣ್ಣೀರು ಬಟ್ಟೆ, ಕುರಿ ಎಮ್ಮೆ, ದನರಾಸುಗಳೇ ಸಂಪತ್ತು. ರಾಸುಗಳನ್ನು ಮೇಯಿಸುವ ಕೆಲಸ ಮಕ್ಕಳದು.

ಆ ದಿನ ಲಿಂಗಣ್ಣ ಪೇಟೆಯಿಂದ ಊರಿಗೆ ಹೋಗುವಾಗ, ಅಪ್ಪ ಮಾತಾಡಿಸಿದರೂ ಮಾತಾಡುತ್ತಿರಲಿಲ್ಲ. ಅವನ ತಲೆಯಲ್ಲಿದ್ದದ್ದೆಲ್ಲ ವಾಲಿಬಾಲ್ ಒಂದೇ. ಕನಸಿನಲ್ಲಿಯೂ ವಾಲಿಬಾಲ್ ಆಟದ ಚಿತ್ರ ಅವನನ್ನು ಕೈಬೀಸಿ ಕರೆಯುತ್ತದೆ. 'ಅವ್ವ', ನಾನು ಪೇಟೆಗೆ... ಚೆಂಡಾಟ ಆಡ್ಬೇಕು... ನನ್ನ ಹಿಡೀಬೇಡಿ, ಬಿಡಿ' ಎಂದು ಕನವರಿಸುತ್ತಾನೆ. 'ಯಾಕಪ್ಪಾ...... ಏನಾಯ್ತಪ್ಪ....' ಎಂದು ಪಕ್ಕದಲ್ಲಿ ಮಲಗಿದ್ದ ತಾಯಿ ಅವನನ್ನು ತಟ್ಟುತ್ತಾಳೆ. ಪುಟ್ಟೇಗೌಡ ನಡೆದ ಸಂಗತಿಯನ್ನು ತಿಳಿಸುತ್ತಾನೆ. 'ಚೆಂಡು ತಂದ್ಕೊಡಿ ತನ್ತೆವಲ್ತೀರ್‍ಸಿಕೊಳ್ಳಿ' ಎಂದು ಹೇಳಿದಾಗ ಪುಟ್ಟೇಗೌಡ 'ನೀನ್ಸುಚ್ಚಿ ಅದೆಲ್ಲ ಓದ್ದೋರಾಡೋ ಆಟ ಕಣೆ' ಎಂದು ಹೇಳಿದಾಗ ಈ ಮಾತನ್ನು ಕೇಳಿ 'ನಾನ್ಯಾಕೋದ್ಬಾರ್‍ದು'? ಎಂದವನು ಕುಳಿತೆಡೆ, ನಿಂತೆಡೆ ಚಿಂತಿಸುತ್ತಾನೆ. ಗೆಳೆಯರಾಗಲಿ, ಚೆನ್ನಿಯಾಗಲಿ ಆಟಕ್ಕೆ ಕರೆದರೆ ಹೋಗುತ್ತಿರಲಿಲ್ಲ. 'ನಾನಿಸ್ಕೋಲ್ಗೆ ಓಗ್ಬೇಕು, ಓದ್ಬೇಕು' ಎಂದು ಹೇಳುತ್ತಿದ್ದ. 'ಕಾಡ್ನಲ್ಲಿ ಮಾವ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ವಾಲಿಬಾಲಿಗೆ ವಾಲಿದ ಹಳ್ಳಿಯ ಹುಡುಗ, ಪುಟ. ೧೭.

ಯಾರೊಂದ್ಗೂ ಆಡೋಲ್ಲ. ನಾನ್ಮಾತಾಡಿಸಿದ್ರೂ ಮಾತಾಡೋಲ್ಲ. ತಲೆ ಬಗ್ಸಿಕೊಂಡು ಸುಮ್ಕೆ ಕೂತಿರ್‍ತಾನೆ. ಹತ್ರ ಬಂದ ಆಡ್ಗಳನ್ನ ಮಾತಾಡ್ಸೋಲ್ಲ' ಎಂದು ಚೆನ್ನಿ ಅಜ್ಜಿಯೊಡನೆ ಮಾವನ ಪ್ರಸ್ತಾಪವನ್ನು ಹೇಳುತ್ತಾಳೆ. 'ನಿಂಗೆಂಗಾಗ್ತದೆ ಏಳೊ, ಮೊಗ, ಅಣ್ಣಂಗಾದ್ರೂ ಏಳಿ ನಿನ್ಗೇನ್ಬೇಕೋ ಅದನ್ಮಾಡಿಸ್ತೀನಿ, ನಿನ್ನಪ್ಪನ್ಗೆ ಸಂಸಾರ ಸಾಕೋದೇ ಕಷ್ಟ. ನಿನ್ನಡೆ ಅವರ್ ಮನಸ್ಸರಿಯೋಲ್ಲ' ಎಂದು ಆಲ್ಪರಿಯುತ್ತಾಳೆ. 'ಅವ್ವ ನಾನಿಸ್ಕೋಲ್ಗೋಗ್ಬೇಕಣವ್ವ' ಎಂಬುದೊಂದೆ ಲಿಂಗಣ್ಣನು ಗೋಳ್ಗರೆಯುತ್ತಾನೆ. ಅಳ್ಬೇಡ ನನ್ನ ಚಿನ್ನ, ನೀನತ್ರೆ ನಾನೂ ಅಳ್ತೀನಿ' ಎಂದು ಮಗನನ್ನು ತಬ್ಬಿಕೊಂಡು, ತಾಯಿ ಸಪ್ಪಗಿದ್ದರೆ ಸಾಕು ಲಿಂಗಣ್ಣ ತಾಯಿಯ ಕಣ್ಣಲ್ಲಿ ನೀರು ಕಂಡರಂತು ಅವನು ಸಚರಾಚರವಸ್ತುಗಳ ಅಂತಃಕರಣ ಕರಗುವಂತೆ ರೋದಿಸುತ್ತಾನೆ. ನಿದ್ದೆಗಣ್ಣಿನಲ್ಲಿಯೇ ತಾಯಿಯ ಕೆನ್ನೆ ಕಣ್ಣುಗಳನ್ನು ಸವರುತ್ತ "ಅಳ್ಬೇಡವ್ವ, ನಂಗಿಸ್ಕೋಲೆ ಬೇಡ, ನನ್ಗಾಡೇ ಗತಿ ಅಂತ ತಿಳ್ಕೊಂಡಿದ್ಬುಡ್ತೀನಿ"[೧] ಎಂದು ತಾಯಿಯನ್ನು ಸಮಾಧಾನಪಡಿಸುತ್ತಾನೆ. ಆದರೆ ಹೆತ್ತ ಕರುಳಿಗೆ ಮಗನ ಸಂಕಟ ಅರ್ಥವಾಗುವಂತೆ ಭಗವಂತನಿಗೂ ಅರ್ಥವಾಗುವುದಿಲ್ಲ. ಇಲ್ಲಿ ಮಗನ ಆಸೆಯನ್ನು ಈಡೇರಿಸಬೇಕೆಂದು ತಾಯಿ. ತಾಯಿ ಎಲ್ಲಿ ನನ್ನಿಂದ ಯೋಚ್ನೆ ಮಾಡುತ್ತಾಳೆ. ನೋವಾಗುತ್ತದೆಂದು ಮಗನ ಯಾತನೆಯು ತನ್ನ ಆಸೆ ಈಡೇರದಿದ್ದರೂ ಪರ್ವಾಗಿಲ್ಲ ನನ್ನಿಂದ ತಾಯಿ ಮನಸ್ಸಿಗೆ ನೋವನ್ನುಂಟು ಮಾಡಬಾರದೆಂದು ಮಗ. ಕೊನೆಗೆ ಅವ್ವ ಹಿರಿಯ ಮಗನಿಗೆ ಹೇಳಿದಾಗ, ಅಪ್ಪನಿಗಿಷ್ಟೆ ನಾವೇನ್ ಮಾಡೋಕಾಗ್ತದೆ? ಎಂದು ಮಾದಯ್ಯ ಹೇಳಿದಾಗ 'ಯಾರಾದ್ರೂ' ಆಡ್ಮೇಯ್ಸೊದಾದ್ರೆ ಅವರ್ಬೇಡ ಅನ್ನೋಲ್ಲ, ಮೊಗ' ಎಂದು ತಾಯಿ ಹೇಳಿದಾಗ. ನಾನೇ ಬೆಳಗ್ಗೆ ಬೇಗ ಎದ್ದು, ಕಸಮುಸರೆ ಮುಗ್ಸಿ, ಹಿಟ್ಬೇಯ್ಸಿ ನಾನೇ ಆಡಟ್ಕೊಂಡೋಗ್ತೀನಪ್ಪ. ಚೆನ್ನಿ ಮಾವ ಓದ್ಲಿ. ನಮ್ಮಾಡ್ಜತೇಗೆ ನಿಮ್ಮಾಡ್ನೂ ಹೊಡ್ಕೊಂಡೋಗ್ತೀನಿ' ಎಂದು ಹೇಳುತ್ತಾಳೆ.

ಮಾದಯ್ಯ ತಮ್ಮನನ್ನು ಕರೆದುಕೊಂಡು ಚನ್ನಂಗೆರೆಗೆ ಹೋಗುತ್ತಾನೆ. ಅಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಕೃಷ್ಣಪ್ಪ ಎಂಬ ಉಪಾಧ್ಯಾಯರಿದ್ದರು. ಅವರಿಗಿದ್ದದ್ದು ಒಂದೇ ಕಣ್ಣು. ಉಪಾಧ್ಯಾಯರಿಗೆ ಶಿಕ್ಷಣ ಕಲಿಯಬೇಕೆಂಬ ಹಂಬಲ. ಆ ವಯಸ್ಸಿನಲ್ಲಿರುವುದನ್ನು ಕಂಡು ಅಂಥವರನ್ನು ವಿದ್ಯಾವಂತರನ್ನಾಗಿ ಮಾಡಬೇಕಾದ್ದು ತಮ್ಮ ಧರ್ಮ ಎಂದು ತಿಳಿದಿದ್ದ ಕೃಷ್ಣಪ್ಪನವರು ಮಾದಯ್ಯನಿಗೆ ಕೆಲವು ಷರತ್ತುಗಳನ್ನು ಹಾಕುತ್ತಾರೆ. 'ನಿನ್ನ ತಮ್ಮನನ್ನು ಶಾಲೆಗೆ ಸೇರಿಸಿಕೊಳ್ಳಲು ಸಾಧ್ಯವಿಲ್ಲ. ಅವನು ಖಾಸಗಿಯಾಗಿ ಕನ್ನಡ ಲೋಯರ್ ಸೆಕಂಡರಿ ಪರೀಕ್ಷೆ ಕಟ್ಟಬಹುದು.

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ವಾಲಿಬಾಲಿಗೆ ವಾಲಿದ ಹಳ್ಳಿಯ ಹುಡುಗ, ಪುಟ. ೨೦.

೬ ನಾಮದಿಂದ ಇವನ ವಿದ್ಯಾಭ್ಯಾಸ ಆರಂಭವಾಗಬೇಕಾಗಿದೆ. ಎರಡು ವರ್ಷ ನನ್ನ ಬಳಿ ಬಿಟ್ಟರೆ ನಾನಿವನನ್ನು ಪರೀಕ್ಷೆ ಕಟ್ಟಿಸುತ್ತೇನೆ. ಮನೆಗೆ ಬಂದಾಗಲೂ ಇವನು ಪಾಠ ಓದಿಕೊಳ್ಳಬೇಕು. ನಾನೇ ಅಟ್ಟದ್ದರಲ್ಲಿ ಇವನಿಗೆ ಒಂದಿಷ್ಟು ಅನ್ನ ಹಾಕುತ್ತೇನೆ ಎನ್ನುತ್ತಾರೆ. ಬೆಳಿಗ್ಗೆ ೫ ಗಂಟೆಗೆ ಎದ್ದು ಬಟ್ಟೆ ಒಗೆದುಹಾಕಿ. ತಣ್ಣೀರುಸ್ನಾನ ಮುಗಿಸಿ, ಲಿಂಗಣ್ಣ ಓದು ಬರೆಹಗಳಲ್ಲಿ ತೊಡಗಬೇಕಾಯಿತು. "ಎಲ್ಲ ಹುಡುಗರಿಗೂ ಒಂದೇ ಶಿಕ್ಷಣ ವಿಧಾನ ಸರಿಯಲ್ಲ. ಆ ವಿದ್ಯಾರ್ಥಿಯ ಒಳಚರ್ಯೆ, ಶಕ್ತಿಸಾಮರ್ಥ್ಯ ಅಭಿರುಚಿಗಳಿಗನುಗುಣವಾಗಿ ಪಾಠ ಹೇಳಿಕೊಟ್ಟರೆ, ಮಾರ್ಗದರ್ಶನ ಮಾಡಿದರೆ ಸಮಸ್ತರೂ ವಿದ್ಯಾವಂತರಾಗುತ್ತಾರೆ"[೧] ಎನ್ನುವ ವಿಶ್ವಾಸ ಕೃಷ್ಣಪ್ಪನವರಿಗಿತ್ತು. ಈ ಅಂಶವನ್ನು ಪ್ರತಿಯೊಬ್ಬ ಉಪಾಧ್ಯಾಯರು ಕೂಡ ಕೃಷ್ಣಪ್ಪನವರ ಹಾಗೆಯೇ ತಿಳಿದುಕೊಂಡು ಪಾಲಿಸಿದರೆ ಎಲ್ಲರನ್ನು ಕೂಡ ವಿದ್ಯಾವಂತರನ್ನಾಗಿ ಮಾಡಿಸಬಹುದೆನಿಸುತ್ತದೆ.

ಕೃಷ್ಣಪ್ಪನವರ ಉತ್ತೇಜನ ಬೋಧನ ಕೌಶಲದಿಂದಾಗಿ ತನ್ನ ಶ್ರಮದಿಂದಾಗಿ ಲಿಂಗಣ್ಣ ಕೆ.ಎಲ್.ಎಸ್. ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲೂ, ಮತ್ತೊಂದು ವರ್ಷದಲ್ಲಿ ಇಂಗ್ಲಿಷ್ ಲೋಅರ್ ಸೆಕೆಂಡರಿ ಪರೀಕ್ಷೆಯಲ್ಲಿಯೂ ಪಾಸಾಗುತ್ತಾನೆ. ವಾಲಿಬಾಲ್ ಆಡುವ ಅರ್ಹತೆ ದೊರೆಯಬೇಕಾದರೆ ಹೈಸ್ಕೂಲಿಗೆ ಹೋಗಲೇಬೇಕು. ಆದರೆ ಅವನನ್ನು ಸುಂದರನಗರದಲ್ಲಿರಿಸಿ ಓದಿಸುವ ಚೈತನ್ಯ ತಂದೆತಾಯಿಯರಿಗಿಲ್ಲ. ಪಟ್ಟಣಕ್ಕೆ ಸೇರಿದಂತೆ ಒಂದೆರಡು ಗ್ರಾಮಗಳಲ್ಲಿ ಗೌಡರನ್ನು ಪರಿಚಯ ಮಾಡಿಕೊಂಡರೆ, ಒಂದೆರಡು ಮನೆಯಲ್ಲಿ ಪಾಠ ಹೇಳಿದರೆ ಊಟಬಟ್ಟೆಗಳಿಗೆ ಕೊರತೆಯಿರಲಾರದೆಂದು 'ರೋಗಿ ಬಯಸಿದ್ದು ಹಾಲು ಅನ್ನ, ವೈದ್ಯರೇಳಿದ್ದು ಹಾಲು ಅನ್ನ' ಎಂಬಂತೆ ಕೃಷ್ಣಪ್ಪ ಸಲಹೆ ನೀಡುತ್ತಾರೆ. ಗೌಡರನ್ನು ಭೇಟಿಮಾಡಿ ತನ್ನ ಸ್ಥಿತಿಗತಿಗಳನ್ನು ತಿಳಿಸಿ, ವಾರಾನ್ನ ಹಾಕುವಂತೆ ಕೇಳಿಕೊಳ್ಳುತ್ತಾನೆ. ಅವನ ಎತ್ತರದ ನಿಲುವು, ಆ ನಿಲವಿಗೆ ತಕ್ಕಂಥ ರಸಬಾಳೆ ಹಣ್ಣಿನ ಬಣ್ಣ ಅವನ ಕಣ್ಣಿನ ಕಾಂತಿ ಅವನ ಚುರುಕುಬುದ್ಧಿ, ಗೌಡರು ಆಕರ್ಷಿತರಾಗಿ ಸಹಾಯ ನೀಡುತ್ತಾರೆ. ಊರಿಗೆ ಬಂದ ದೇಶನಾಯಕರ ಭಾಷಣಗಳನ್ನು ಕೇಳಿದ ಅವನ ಮನಸ್ಸಿನಲ್ಲಿ ದೇಶಾಭಿಮಾನವುಕ್ಕುತ್ತದೆ. ಗಾಂಧೀಜಿಯ ಉಪನ್ಯಾಸವನ್ನು ಕೇಳಿ ಅವರ ಭಕ್ತನಾಗಿ ವಿದೇಶಿಯ ವಸ್ತ್ರಗಳನ್ನು ಸುಟ್ಟು ಖಾದಿಯುಡುಗೆಯನ್ನು ತೊಡುತ್ತಾನೆ. ಗಾಂಧೀಜಿಯ ಪ್ರಭಾವ ಎಷ್ಟರಮಟ್ಟಿಗೆ ಬೀರಿದೆಂಬುದು ತಿಳಿದುಬರುತ್ತದೆ. ಲಿಂಗಣ್ಣ ಕಾಡುಹರಟೆಯಲ್ಲಿ ಕಾಲಕಳೆಯುವುದಿಲ್ಲ. ಪಾಠದ ವಿಷಯವೊ, ದೇಶದ

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ವಾಲಿಬಾಲಿಗೆ ವಾಲಿದ ಹಳ್ಳಿಯ ಹುಡುಗ, ಪುಟ. ೨೧.

ಸಮಸ್ಯೆಗಳೂ ಅವುಗಳನ್ನು ಕುರಿತು ಗೆಳೆಯರೊಡನೆ ಗಣ್ಯರೊಡನೆ ಚರ್ಚಿಸುತ್ತಾ ಬಹುಬೇಗನೆ ಹೊಸ ವಾತಾವರಣಕ್ಕೆ ಹೊಂದಿಕೊಳ್ಳುತ್ತಾನೆ. ಹೈಸ್ಕೂಲು ಸೇರಿದಾಗಿನಿಂದ ಅವನು ಸಂಜೆಯ ವೇಳೆಯನ್ನು ವಾಲಿಬಾಲ್ ಬಯಲಲ್ಲಿ ಕಳೆಯುತ್ತಾನೆ. ಸಂಸ್ಥಾನಮಟ್ಟದ ಪ್ರೌಢಶಾಲಾ ವಿದ್ಯಾರ್ಥಿಗಳ ಸ್ಪರ್ಧೆಯಲ್ಲಿ ಅವನು ತನ್ನ ಹೈಸ್ಕೂಲು ಪರವಾಗಿ ಆಡಿದಾಗ ಜಯ ಲಭಿಸುತ್ತದೆ. ಅವನ ಇಷ್ಟಾರ್ಥವೂ ಪೂರೈಸುತ್ತದೆ. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿಯೂ ತೇರ್ಗಡೆಹೊಂದುತ್ತಾನೆ. ಆದರೆ ಅವನ ಏಳ್ಗೆಯನ್ನು ನೋಡುವ ಭಾಗ್ಯ ತಾಯಿಗಿರಲಿಲ್ಲ.

ಲಿಂಗಣ್ಣನಿಗೆ ಕೈಗಾರಿಕೆ ಇಲಾಖೆಗೆ ಸೇರಿದ ನಗರದ ರೇಷ್ಮೆಫಾರಂನಲ್ಲಿ ಅವನಿಗೊಂದು ಕರಣಿಕನ ನೌಕರಿ ದೊರೆಯುತ್ತದೆ. ಚೆನ್ನಿಯನ್ನು ಮದುವೆ-ಯಾಗುತ್ತಾನೆ. ಆರ್ಯಸಮಾಜಕ್ಕೆ ಸೇರಿದ ಆರ್ಯಮೂರ್ತಿಯವರು ಕೈಗಾರಿಕಾ ಶಾಲೆಯಲ್ಲಿ ಡ್ರಾಯಿಂಗ್ ಉಪಾಧ್ಯಾಯರಾಗಿದ್ದರೂ ಸಮಾಜ ಸುಧಾರಕರು, ಗಾಂಧಿ ಅನುಯಾಯಿಗಳು ಒಳ್ಳೆಯ ಭಾಷಣಕಾರರಾಗಿದ್ದರು. ಅವರ ಪತ್ನಿ ಸರಸ್ವತಮ್ಮ ಶಾಲಾ ಉಪಾಧ್ಯಾಯಿನಿಯಾಗಿದ್ದು, ಪತಿಯ ಸಮಾಜ ಸೇವಾಕಾರ್ಯಗಳಲಲ್ಲಿ ನೆರವಾಗುತ್ತಿದ್ದರು. ಲಿಂಗಣ್ಣ, ಆರ್ಯಮೂರ್ತಿಯರಿಬ್ಬರೂ ಆತ್ಮೀಯ ಗೆಳೆಯರಾಗಿದ್ದು ಆಗಿಂದಾಗ್ಗೆ ಹಳ್ಳಿಗಳಿಗೆ ಹೋಗಿ ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮಗಳ ಬಗ್ಗೆ ಪ್ರಚಾರ ಮಾಡುತ್ತಿದ್ದರು. ಇವರಿಬ್ಬರ ಜೊತೆಗೆ ಕಾಂಗ್ರೆಸ್ ಧುರೀಣ ತಿಮ್ಮಪ್ಪನವರೂ ಸೇರಿಕೊಳ್ಳುತ್ತಿದ್ದರು.

ಸರಸ್ವತಮ್ಮನ ಬಾಯಲ್ಲಿ ಚೆನ್ನಿ ಚೆನ್ನಮ್ಮಳಾಗುತ್ತಾಳೆ. ಸರಸ್ವತಮ್ಮ ಚೆನ್ನಮ್ಮನಿಗೆ ಗೃಹವಿಜ್ಞಾನದ ಬಗ್ಗೆ ತಿಳುವಳಿಕೆ ನೀಡುತ್ತಾರೆ. ಅವರ ಸಂಸಾರದ ನಡೆವಳಿಯನ್ನು ನೋಡುನೋಡುತ್ತ ಸಹವಾಸ ದೋಷವೆಂಬಂತೆ ಚೆನ್ನಮ್ಮ ಬಹುಬೇಗನೆ ಸುಸಂಸ್ಕೃತಳಾಗುತ್ತಾಳೆ. ಒಮ್ಮೊಮ್ಮೆ ಚೆನ್ನಮ್ಮ ಸರಸ್ವತಮ್ಮನಿಗೆ ಸಹಾಯ ಮಾಡುತ್ತಾಳೆ. ಅವರ ಮಾತುಗಳಿಂದ ಚೆನ್ನಮ್ಮ ಅಪಾರ ಅನುಭವವನ್ನು ಸಂಪಾದಿಸುತ್ತಾಳೆ. ಸರಸ್ವತಮ್ಮ ಮಕ್ಕಳು ಪುಸ್ತಕ ಹಿಡಿದು ಕೂತಾಗ ಇವರು ಹುಚ್ಚರಿರಬೇಕೆಂದೂ ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಾಳೆ. ಇವರ ಬುದ್ಧಿವಂತಿಕೆಗೆ ಘನತೆಗೆ ಕೀರ್ತಿಗೆ ಓದೇ ಕಾರಣವಿರಬೇಕೆಂದೆನಿಸಿ ಮಕ್ಕಳಿಗೂ ವಿದ್ಯೆ ಕಲಿಸಬಹುದೆಂದು ನಿರ್ಧರಿಸಿ ವಿದ್ಯೆಕಲಿಯಲು ನಿರ್ಧರಿಸುತ್ತಾಳೆ. ಅವಳು ಕೂಡ "ಹೊಸ ಹುಟ್ಟು ಪಡೆದಂತೆ, ಕುರುಡನಿಗೆ ಕಣ್ಣು ಬಂದಂತೆ, ಹೆಳವನಿಗೆ ಕಾಲು ಬಂದಂತೆ"[೧] ಸಂತಸಪಡುತ್ತಾಳೆ. ವಾಲಿಚಾರಿಗೆ ವಾಲಿದ ಹುಡುಗ' ನೌಕರನಾಗಿ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ವಾಲಿಬಾಲಿಗೆ ವಾಲಿದ ಹಳ್ಳಿಯ ಹುಡುಗ, ಪುಟ. ೨೮.

ಆದರ್ಶ ದೇಶಭಕ್ತನಾಗಿ, ವಿವಾಹಿತನಾಗಿ ಬೆಳೆದ ಹಳ್ಳಿ ಹುಡುಗಿಗೆ ಓದಿನ ಕುತೂಹಲವನ್ನು ಕೆರಳಿಸುತ್ತಾನೆ. ಓದು ಕಲಿಸುತ್ತಾನೆ.

ಒಳ್ಳೆಯ ಕೆಲಸಕ್ಕೆ ನೂರಾರು ವಿಘ್ನಗಳೆಂಬಂತೆ ಈ ಪ್ರಕರಣದಿಂದ ಸರ್ಕಾರದ ಕೆಂಗಣ್ಣು ಲಿಂಗಣ್ಣ, ಆರ್ ಮೂರ್ತಿಗಳ ಮೇಲೆ ಬೀಳುತ್ತದೆ. 'ನೀವು ಹಳ್ಳಿಗಳಲ್ಲಿ ಗಾಂಧಿ ತತ್ವ ಪ್ರಚಾರದ ನೆಪದಲ್ಲಿ ಕಾಂಗ್ರೆಸ್ ಪಕ್ಷದ ಪರವಾಗಿ ಪ್ರಚಾರಮಾಡುತ್ತಿರಂತೆ. ಸರ್ಕಾರಿ ನೌಕರರು ತಮ್ಮ ಕರ್ತವ್ಯವನ್ನು ತೆರೆದು ಸರ್ಕಾರಕ್ಕೆ ಸಂಬಂಧಿಸದ ಕಾರ್ಯಕ್ರಮಗಳನ್ನು ನಡೆಸಬಹುದೇ? 'ರಜಾದಿನಗಳಲ್ಲಿ ನಡೆಸುತ್ತೇನೆಂದಾಗ" ರಜಾದಿನಗಳಲ್ಲಿಯೂ ಸರ್ಕಾರ ಸಂಬಳ ಕೊಡುತ್ತದೆ-ಯಾದ್ದರಿಂದ ನಾವು ಅನ್ಯವಿಷಯಗಳಲ್ಲಿ ಆಸಕ್ತರಾಗಬಾರದು. ಸರ್ಕಾರ ಕೊಡುವ ಸಂಬಳಕ್ಕಾಗಿ ನಾನು ಆರುದಿನ ಕಛೇರಿಯಲ್ಲಿ ದುಡಿಯುತ್ತೇನೆ. ಜನತಾ ಜನಾರ್ಧನನ ಋಣತೀರಿಸುವ ಸಲುವಾಗಿ ಒಂದು ದಿನ ಮಾತ್ರ ಗ್ರಾಮಸೇವೆಯಲ್ಲಿ ತೊಡಗುತ್ತೇನೆ. ಅದೂ ಸಹ ಸರ್ಕಾರ ಮಾಡಬೇಕಾದ ಕೆಲಸವೇ' ಎನ್ನುತ್ತಾರೆ. ಅವರು ಸೂಪರಿಟೆಂಡೆಂಟ್‌ರೊಡನೆ ಸಮಾಲೋಚಿಸಿ ದೂರದೂರಿಗೆ ಒಂದು ವಾರದೊಳಗಾಗಿ ಲಿಂಗಣ್ಣನವರನ್ನು ಮೂಗೂರಿಗೆ ವರ್ಗಾಯಿಸುತ್ತಾರೆ. ಎರಡು ವರ್ಷಗಳೊಳಗಾಗಿ ಇವರಿಗೆ ಬೆಂಗಳೂರಿಗೆ ವರ್ಗವಾಗುತ್ತದೆ. ನಿವೃತ್ತರಾದನಂತರ ಹತ್ತಿರದ ಸುಂದರನಗರದಲ್ಲಿಯೇ ತಳವೂರುತ್ತಾರೆ. ತಿಮ್ಮಪ್ಪನವರನ್ನು ಅನುಸರಿಸುತ್ತಾರೆ. ಯಾರಾದರೂ ತಿಮ್ಮಪ್ಪನವರ ದೌರ್ಬಲ್ಯಗಳನ್ನು ಎತ್ತಾಡಿದರೆ 'ನಾನು ಯಾವಾಗಲೂ ಅವರ ಬಳಿಯಲ್ಲಿರುವವ. ನನಗೆ ಗೊತ್ತಿಲ್ಲದ್ದು ನಿಮಗೆ ಹೇಗೆ ಗೊತ್ತಾಯ್ತು?' ಎಂದು ನಗುನಗುತ್ತಲೇ ಮೃದುವಾಗಿ ಕೇಳುತ್ತಾರೆ. 'ಬೆನ್ನುಮುಖ ಹತ್ತಿರದಲ್ಲಿದ್ದರೂ ಕಾಣುವುದಿಲ್ಲವಷ್ಟೇ?' ಎಂದು ಹೇಳಿದಾಗ "ಕಲ್ಲನ್ನು ಬಿಟ್ಟು ಅಕ್ಕಿಯನ್ನು, ಜಳ್ಳನ್ನು ಬಿಟ್ಟು ಕಾಳನ್ನು ಆರಿಸಿಕೊಳ್ಳುವಂತೆ, ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನಾರಿಸಿಕೊಳ್ಳಿ, ಗುಣದೋಷಗಳು ಅವರವರ ಮನೋಧರ್ಮವನ್ನ-ವಲಂಬಿಸುವುದುಂಟಷ್ಟೇ?"[೧] ಎಂದು ಲಿಂಗಣ್ಣ ಉತ್ತರಿಸುತ್ತಾರೆ. ಕೆಟ್ಟದ್ದು ಇದ್ದರೆ ಒಳ್ಳೆಯದನ್ನು ಗುರುತಿಸುವುದು. ಅದಕ್ಕೆ ಬೆಲೆ ಸಿಗುವುದು. (ಪ್ರತಿಯೊಬ್ಬರಲ್ಲಿಯೂ ಏನಾದರೊಂದು ದೋಷವಿದ್ದೆ ಇರುತ್ತದೆ).

ಲಿಂಗಣ್ಣನವರ ದೃಷ್ಟಿಯಲ್ಲಿ ಜೀವನವೊಂದು ಮಹಾಯಾತ್ರೆ. ಶೀಲಶ್ರೀಜ್ಞಾನಿಗಳು ಪರಸ್ಪರ ಕೈಹಿಡಿದುಕೊಂಡಾಗ ಮಾತ್ರ ಅದು ಯಾತ್ರೆ-ಯಾಗುತ್ತದೆಂಬುದೂ ಅವರಿಗೆ ಗೊತ್ತು. ಅಂದರೆ ಜೀವನವೆನ್ನುವುದು ಒಂದು

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ವಾಲಿಬಾಲಿಗೆ ವಾಲಿದ ಹಳ್ಳಿಯ ಹುಡುಗ, ಪುಟ. ೩೩.

ರಥವಿದ್ದಂತೆ. ಅದಕ್ಕೆ ಹೇಗೆ ಎರಡು ಗಾಲಿಗಳು ಒಂದೇ ಚಲಿಸಿದಾಗ ಮಾತ್ರ ಹೋಗುವುದಕ್ಕೆ ಸಾಧ್ಯವೋ ಹಾಗೆ. ಲಿಂಗಣ್ಣ ಮತ್ತು ತಿಮ್ಮಪ್ಪರಿಬ್ಬರ ಸ್ನೇಹವಿದ್ದುದ್ದು. ತಿಮ್ಮಪ್ಪನವರು ರೋಗಗ್ರಸ್ತರಾಗಿ ಆಸ್ಪತ್ರೆಯಲ್ಲಿ ತಿಂಗಳುಗಟ್ಟಲೆ ಮಲಗಿದ್ದವರಿಗೆ ಶುಶ್ರೂಷೆಯನ್ನವರು ನಡೆಸುತ್ತಾರೆ. ಲಿಂಗಣ್ಣನವರ ರಕ್ತವೊಂದೇ ರೋಗಿಗೆ ಹೊಂದುತ್ತಿದ್ದುದು. ಎರಡು, ಮೂರು ಸಲ ಅವರು ರಕ್ತವನ್ನು ದಾನ ಮಾಡಿದರು. 'ತಿಮ್ಮಪ್ಪನ ದೇಶಸೇವೆಗಾಗಿ ನಾನೆಷ್ಟು ತ್ಯಾಗಮಾಡಿದರೂ ಕಡಿಮೆಯೇ; ನಾನು ಹೋದರೇನಾಯ್ತು; ತಿಮ್ಮಪ್ಪನ ರೋಗ ವಾಸಿಯಾದರೆ ಸರಿ, 'ತಿಮ್ಮಪ್ಪ ಉಳಿಯಲಿ, ಬಾಳಲಿ' ಎಂದು ಹಾರೈಸುತ್ತಾರೆ. ಅವರ ಹಾರೈಕೆ ಫಲಿಸುತ್ತದೆ.

ಎತ್ತಣ ಮಾಮರ, ಎತ್ತಣ ಕೋಗಿಲೆ ಎಂಬಂತೆ ತಿಮ್ಮಪ್ಪ ಮತ್ತು ಲಿಂಗಣ್ಣನವರ ಸ್ನೇಹ ಮೆಚ್ಚುವಂತಹದು.

**ಪ್ರೇಮಮೃತ್ಯು:** ಈ ಕತೆಯು ಬಸವರಾಜು ಶಿಲ್ಪ ಇಬ್ಬರೂ ದೇವರುಗಳು ಕರುಬುವಂತಹ ಅನುರೂಪ ದಾಂಪತ್ಯದಿಂದ ಇರಬಹುದಿತ್ತು. ಆದರೆ ಇವರಿಬ್ಬರ ನಡುವೆ ಬಾಲೆಯ ಸಮಸ್ಯೆ ಕಂಟಕವಾಗಿ ಬಂದು, ಹಿರಿಯರ ಅಂದರೆ ಸಂಪ್ರದಾಯಸ್ಥರ ಕೈಗೆ ಸಿಕ್ಕು ಶಿಕ್ಕು ಶಿಲ್ಪಳ ತಂದೆ, ಪ್ರಿಯಕರ ಬಸವರಾಜುವನ್ನು ಇಲ್ಲವಾಗಿಸುವುದು. ನಂತರ ಶಿಲ್ಪ ಹುಚ್ಚಿಯಾಗಿ ಯಾತನೆ ಅನುಭವಿಸಿ ಕೊನೆಯುಸಿರೆಳೆಯುವುದು. ಈ ಕಥೆ ಒಂದು ರೀತಿಯಲ್ಲಿ ದುರಂತ ಕಥೆಯಾಗಿ ಮುಕ್ತಾಯವಾಗುತ್ತದೆ.

ಶಿಲ್ಪಾ ಹೆಸರಿಗೆ ತಕ್ಕಂತೆ ಅಷ್ಟೇನೂ ರೂಪವತಿಯಲ್ಲದಿದ್ದರೂ ಕುರೂಪಿಯಲ್ಲ. ಗಿರಿಜೆಯ ಆಕೆಯ ಪ್ರಾಣಸ್ನೇಹಿತೆ, ರಾಜಾಜಿನಗರ ಮಹಿಳಾ ಕಾಲೇಜಿನ ಹತ್ತಿರದಲ್ಲೆ 'ಬಸವೇಶ್ವರ ಸ್ಟೋರ್ಸ್ ಅಂಗಡಿಯಿದೆ. ಬಸವರಾಜು ಬಿ.ಎ. ಪದವಿಧರನಾದರೂ ಅಂಗಡಿಯ ವಹಿವಾಟನನ್ನು ನಡೆಸುತ್ತಿರುತ್ತಾನೆ. ಬಸವರಾಜು ತುಂಬ ಸೌಜನ್ಯಶಾಲಿ, ಸ್ನೇಹಮಯಿ, ಗಿರಿಜೆಯನ್ನು ಬಾಲ್ಯದಿಂದ ಬಲ್ಲವ-ನಾಗಿದ್ದರಿಂದ ಸಲಿಗೆ ಅವಳೊಂದಿಗಿರುತ್ತದೆ. ಆಕೆಯ ಇತರ ಯುವಕರು ತನ್ನ ಗೆಳತಿಯರನ್ನು ನೋಡುತ್ತ ತುಂಟನಗೆ ಬೀರುತ್ತಿದ್ದರೆ ವಿನಾ ತನ್ನ ಕಡೆಗೆ ಯಾರು ನೋಡುತ್ತಿಲ್ಲವೆಂಬ ಕೀಳರಿಮೆಗೆ ಕಾರಣವಾಗುತ್ತದೆ. ಹೀಗಿರುವಾಗ ಬಸವರಾಜುವಿಗೆ ಹಣ್ಣಿನ ರಸ ಕೊಡುವಾಗ ಹಸ್ತಸ್ಪರ್ಶವಾದಾಗ 'ಅವರ ನಯನಗಳು ಪರಸ್ಪರ ಸ್ಪಂದಿಸುತ್ತದೆ. ಒಬ್ಬ ಸಭ್ಯ ಯುವಕನ ನೋಟ ತನ್ನ ಸರ್ವಾಯವಗಳನ್ನು ಬಾಚಿ ತಬ್ಬಿಕೊಂಡಾಗ ಆನಂದ ಅವಳ ಮೈಮನಗಳನ್ನೆಲ್ಲ ತುಂಬಿಕೊಳ್ಳುತ್ತದೆ. ಬಸವರಾಜು ವೀರಶೈವ ಮತಕ್ಕೆ ಸೇರಿದವನೆಂದು ಗೊತ್ತಾದಾಗ ಶಿಲ್ಪಳ ಮನಸ್ಸಿಗೆ ಆಘಾತವಾಗುತ್ತದೆ. ಜಾತಿಯೂ ಅಡ್ಡ ಬಂದು ನಿಲ್ಲುತ್ತದೆ.

ಇವರಿಬ್ಬರ ನಡುವೆ ಮದುವೆಯ ಮಾತುಕತೆ ನಡೆಯುತ್ತದೆ. ಶಿಲ್ಪ ನಮ್ಮ ತಾಯಿ ತಂದೆಯರಿಬ್ಬರೂ ಒಪ್ಪುವುದಿಲ್ಲವೆಂದು ಬಸವರಾಜು ಯಾವುದಾದರೂ ಮಠದಲ್ಲಿ ಮದುವೆಯಾಗಬಹುದು. ಗಿರಿಜೆ ಮೊದಲಿಗೆ ಒಪ್ಪದಿದ್ದರೂ, ಮದುವೆ ಮುಗಿದ ನಂತರ ಹೊಂದಿಕೊಂಡಾರು ಎಂದು ಹೇಳಿದಾಗ ಶಿಲ್ಪ ಸರಿ ಎಂದು ಮರುಮಾತನಾಡದೆ ಹೋಗುತ್ತಾಳೆ. ಶಿಲ್ಪಳು ಮಾಂಸಾಹಾರವನ್ನು ತ್ಯಜಿಸುತ್ತಾಳೆ. ಶಿಲ್ಪ ಯಾರ‍್ಯಾರ ಜೊತೆಯಲ್ಲಿ ಓಡಾಡುತ್ತಿದ್ದಾಳೆಂಬ ವಿಷಯ ಗೌರಿ-ಶಿವಯ್ಯರಿಗೆ ಗೊತ್ತಾಗುತ್ತದೆ. ನಾನೊಬ್ಬನನ್ನು ಮೆಚ್ಚಿದಾಗಲೇ 'ನನಗೆ ಮದುವೆಯಾದಂತೆ ಲೆಕ್ಕ ಪರಮಪತಿವ್ರತೆಗೆ ಗಂಡನೊಬ್ಬ' ಅವನನ್ನು ಮದುವೆಯಾಗುವುದಾಗಿ ಹೇಳುತ್ತಾಳೆ.

ಗೌರಿಯ ಭಾವ ಚನ್ನೇಗೌಡ ಬರುತ್ತಾನೆ. ಚನ್ನೇಗೌಡ ವಹ್ನಿಪುರದಲ್ಲಿ ನಡೆದ ದುರಂತ ಘಟನೆಯನ್ನು ವಿವರಿಸುತ್ತಾನೆ. ಉರಿಯುವ ಬೆಂಕಿಗೆ ತುಪ್ಪ ಸುರಿದ ಹಾಗೆ. ಬನ್ನಳ್ಳಿಯ ಗೌಡಮನೆತನಕ್ಕೆ ಸೇರಿದ ಚಿನ್ನಸ್ವಾಮಿ. ಆರು ಜನ ಮಕ್ಕಳು, ಮೂವರು ಗಂಡು, ಮೂವರು ಹೆಣ್ಣು, ಎರಡನೆಯವಳು ಕವಿತಾ ಎಸ್‌ಎಸ್‌ಎಲ್‌ಸಿ ಮುಗಿಸಿ ತನ್ನ ಅಜ್ಜಿಗೆ ಸಹಾಯಮಾಡುವುದಾಗಿ ಉಳಿದು-ಕೊಳ್ಳುತ್ತಿದ್ದಳು. ಹೊಲೆಯರ ತಿಮ್ಮ ಆ ಮನೆಯ ಆಳು. ತಿಮ್ಮನ ಮಗ ಎಸ್ಸೆಸ್ಸೆಲ್ಸಿ ಪಾಸು ಮಾಡಿದ. ರಜಾದಿನಗಳಲ್ಲಿ ಒಡೆಯರ ಮನೆಗೆ ಬಂದು ಕೆಲಸ ಮಾಡುತ್ತಿದ್ದನು. ಕವಿತ ನೆರೆಹೊರೆಯ ಮಕ್ಕಳ ಜತೆ ಆಟವಾಡುವಾಗ ಚಂದ್ರನು ಸೇರಿಕೊಳ್ಳುತ್ತಿದ್ದ. ಚಂದ್ರ ಕವಿತಾ ಬೆಳೆಯುತ್ತಿದ್ದಂತೆ ಅವರವರ ಜಾತಿಯ ಅರಿವೂ ಅರಳುತ್ತಿತ್ತು. ಬರಬರುತ್ತ ಚಂದ್ರನಿಗೆ ಕವಿತಾಳ ಹಾವಭಾವಗಳು ಅರ್ಥವಾಗುತ್ತದೆ. ಆದರವನಿಗೆ ದಣಿಗಳ, ತಂದೆತಾಯಿಯರ, ಸಮಾಜದ ಭಯ. ತಿಮ್ಮನಿಗೆ ವಿಷಯ ತಿಳಿದು ಪ್ರಾಣಕಳೆದುಕೊಳ್ಳುವುದಾಗಿ ಹೇಳುತ್ತಾನೆ. ಆದರೆ ಕವಿತಾಳ ಸಮ್ಮೋಹನಾಸ್ತ್ರದಿಂದ ತಪ್ಪಿಸಿಕೊಳ್ಳುವುದು ಕಷ್ಟವಾಗುತ್ತದೆ. ಪ್ರೇಮಕ್ಕೆ ಜಾತಿಯುಂಟೆ ಎಂದು. ಹಾಗಾದರೆ ಇಬ್ಬರೂ ಊರು ಬಿಟ್ಟು ಎಲ್ಲಾದರೂ ಕೆಲಸಕ್ಕೆ ಸೇರಿಕೊಳ್ಳೋಣವೆಂದು ಹೇಳುತ್ತಾಳೆ. ಚಿನ್ನಸ್ವಾಮಿ ದಾಕ್ಷಾಯಿಣಿಯರಿಗೆ ವಿಷಯ ತಿಳಿಯುತ್ತದೆ. 'ಅನ್ನಕೊಟ್ಟು ಸಾಕಿದ್ದಕ್ಕೆ ಈ ಹೊಲೆಯರ ಹೈದ ಇಷ್ಟು ದೂರ ಬಂದನೆ? ಶಾಲೆಗೆ ಹೋಗದಂತೆ ಮೊದಲೇ ಅವನನ್ನು ತಡೆಯಬೇಕಾಗಿತ್ತು' ಎಂದು ಮನಸ್ಸಿನಲ್ಲಿಯೇ ಕುದಿಯುತ್ತಾನೆ. ಇಲ್ಲಿ ಪ್ರೇಮ ಹುಟ್ಟುವುದು ಶಾಲೆಗೆ ಹೋದವರಿಗೆ ಮಾತ್ರವಲ್ಲ. ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿಯೂ ಹುಟ್ಟುತ್ತದೆ. ಅದಕ್ಕೆ ತರತಮ ಬೇಧಭಾವನೆ ಇಲ್ಲವಲ್ಲವೆ, 'ಚಂದ್ರ ಏನಾದ'? ಎಂದು ಶಿವಯ್ಯ ಪ್ರಶ್ನಿಸುತ್ತಾನೆ' 'ಆ ವಿಷಯ ಚಿನ್ನಸ್ವಾಮಿಗೆ ಮಾತ್ರ ಗೊತ್ತು', ಚಿನ್ನಸ್ವಾಮಿ ಸಾಕಿ ಬೆಳೆಸಿದ್ದ ಗೂಂಡಾಗಳಿಗೆ ಮಾತ್ರ ಗೊತ್ತು. ಅಂಥ ಅಪರಾಧ ಮಾಡಿದ ಮಗ

ಇದ್ದರೂ ಒಂದೆ, ಇಲ್ಲದಿದ್ದರೂ ಒಂದೆ ಎಂದು ತಿಮ್ಮ ಬೇನೆ ಬವಣೆಗಳಿಂದ ಕೊರಗುತ್ತಾನೆ. ಕವಿತಾ ಬೇರೊಬ್ಬನ ಕೈ ಹಿಡಿದು ಅದ್ದೂರಿಯಿಂದ ಜೀವನ ನಡೆಸುತ್ತಾಳೆ. ಈ ಕಥೆಯನ್ನು ಕೇಳಿದ ಶಿವಯ್ಯ ತನ್ನ ಮನೆತನಕ್ಕೆ ಅವಮಾನ ಮಾಡಿದ ತನ್ನ ಮಗಳ ಭವಿಷ್ಯವನ್ನು ಹಾಳು ಮಾಡಿದ ನೀಚನನ್ನು ಮುಗಿಸಿ ಬಿಡಬೇಕು ಎಂದು ತೀರ್ಮಾನಿಸಿ ಬಸವರಾಜನನ್ನು ಮುಗಿಸಿಬಿಡುತ್ತಾನೆ. ಶಿಲ್ಪ ಹುಚ್ಚಿಯಾಗಿ, ಆಸ್ಪತ್ರೆಯ ಸೆರೆಮನೆಯಲ್ಲಿ ತನ್ನ ಪ್ರಿಯಕರನ ಹೆಸರು ಹಿಡಿದು ಕೂಗುತ್ತ, ತಲೆಗೂದಲನ್ನು ಕಿತ್ತುಕೊಳ್ಳುತ್ತ ಬಾಯಿಗೆ ಬಂದಂತೆ ಒಯ್ಯುತ್ತ ರೋದಿಸುತ್ತಾಳೆ. ಕೊನೆಯ ದಿನಗಳನ್ನು ಎಣಿಸುತ್ತಾಳೆ.

ಚಂದ್ರ–ಕವಿತಳ ಕಥೆ ಮೂಲಕತೆಗೆ ಹೆಚ್ಚಿನ ಮೆರಗನ್ನು ತಂದು ಕೊಡುವಲ್ಲಿ ಯಶಸ್ವಿಯಾಗಿದೆ.

ಜಾತಿ ಎನ್ನುವುದು ಸಮಾಜದಲ್ಲಿ ಏನೆಲ್ಲ ಮಾಡಿಸುತ್ತದೆ. ಪ್ರೇಮ ಎನ್ನುವುದೇ ಇವೆರಡ ಜೀವನದಲ್ಲಿ ಎಂತಹ ಆಟವಾಡಿಸುತ್ತದೆ.

**ನಾ ಮಾಡಿದ ಕರ್ಮ:** ಈ ಕತೆಯಲ್ಲಿ ಕಾಮ ವಿವಿಧ ಮುಖಗಳನ್ನು ಕಥೆಗಾರರು ಚಿತ್ರಿಸುತ್ತಾರೆ. ಇಲ್ಲಿ ಭೋಗ ವಿಲಾಸವಾಗಿ, ಬರಿಯ ತೆವಲು ತೀರಿಸಿಕೊಳ್ಳಲಿಕ್ಕೆ, ದೇಹದ ಹಸಿವಿನ ಅನಿವಾರ್ಯತೆಯಿಂದ ಶೋಷಣೆಯೂ ಒಂದು ಮಗ್ಗುಲಾಗಿ ಬಂದು ಕಾಮದ ವಿಜೃಂಭಣೆ. ಬದುಕಿನ ಉತ್ಕಟ ಸಮಸ್ಯೆ ಇವುಗಳೂ ಒಂದೊಂದು ಸ್ಥಾನವನ್ನು ಪಡೆದುಕೊಳ್ಳುತ್ತವೆ.

ಚನ್ನಂಗೆರೆಯ ಗಿಡ್ಡೇಗೌಡರು ಶೇಕದಾರರ ವಂಶಸ್ಥರೆಂದು, ಹಳ್ಳಿಯವರೆಲ್ಲ ಈಗಲೂ ಗೌರವಿಸುತ್ತಾರೆ. ಬೇಟೆಗಾರಿಕೆ ಅವರಿಗೊಂದು ಹವ್ಯಾಸವಾಗಿತ್ತು. ಬೇಟೆಗೆ ಹೋದರೆಂದರೆ ಅವರು ಬರಿಗೈಯಲ್ಲಿ ಬಂದವರಲ್ಲ. ಶೇಕದಾರರ ವಂಶದ ಪ್ರತಿಷ್ಠೆಗೆ ಮಹಡಿ ಮನೆಯೂ ಒಂದು ಕಾರಣವಾಗಿತ್ತು. ಆಳುಕಾಳುಗಳ ಮೇಲೆ ಸಾಗುವಳಿಯ ಹೊರೆಯನ್ನು ಹೊರೆಸಿ ಗೌಡರು, ಗೌಡರ ಮಕ್ಕಳೂ ಊರೂರು ತಿರುಗಿಕೊಂಡಿದ್ದರು. 'ಆಳುಮಾಡಿದ್ದು ಹಾಳೆಂಬಂತೆ ಅವರು ಬೆಳೆಯುತ್ತಿದ್ದ ಅವರ ನಿರ್ವಹಣೆಗೆ ಸಾಲುತ್ತಿರಲಿಲ್ಲ. ಮನೆತನದ ಪ್ರತಿಷ್ಠೆಗಾಗಿ ಸಾಲಮಾಡುತ್ತಾರೆ. 'ಕೂತುಣ್ಣುವವನಿಗೆ ಕುಡಿಕೆ ಹೊನ್ನು ಸಾಲದೆ'ಂಬಂತೆ ವೈಭವವನ್ನುಳಿಸಿಕೊಳ್ಳುವುದು ಕಷ್ಟವಾಗುತ್ತದೆ. ಕಂತ್ರಾಟುದಾರ ಪುಟ್ಟಸ್ವಾಮಯ್ಯನವರ ಪರಿಚಯವಾಗುತ್ತದೆ. ಗಿಡ್ಡೇಗೌಡರನ್ನು ತಾಲ್ಲೂಕಿನ ಉಸ್ತುವಾರಿಯನ್ನು ಅವರ ಎರಡನೆಯ ಮಗ ಮಲ್ಲೇಗೌಡರನ್ನು ಲೆಕ್ಕದ ಗುಮಾಸ್ತರನ್ನಾಗಿ, ಮೊದಲ ಮಗ ಗುರುಸ್ವಾಮಿಗೆ ಬೆಂಗಳೂರಿನಲ್ಲೊಂದು ವೈನ್ ಅಂಗಡಿಯನ್ನು ವ್ಯವಸ್ಥೆ ಮಾಡಿಕೊಡುತ್ತಾರೆ. ಮತ್ತೆ ಉತ್ತಮಸ್ಥಿತಿಗೇರುತ್ತಾರೆ.

ಎಲ್ಲೇಗೌಡ ಊರಿನ ಗರೀಬರಲ್ಲೊಬ್ಬ. ವಾರದಲ್ಲೊಂದು ದಿನ ಗಿಡ್ಡೇಗೌಡರಿಗೆ ಅಭ್ಯಂಜನ ಸ್ನಾನಮಾಡಿಸುತ್ತಿದ್ದನು. ಎಲ್ಲೇಗೌಡನಿಗೆ ಚೆನ್ನಿಯೊಂದಿಗೆ ಮದುವೆಮಾಡಿಸುತ್ತಾನೆ. ಐದಾರು ವರ್ಷವಾದರೂ ಮಕ್ಕಳಿರಲಿಲ್ಲ. ಗಿಡ್ಡೇಗೌಡರ ಮನಸ್ಸಿನಲ್ಲೊಂದು ಆಲೋಚನೆ ಹೊಳೆಯುತ್ತದೆ. 'ಈ ಹೆಣ್ಣಿಗೆ ಹಳ್ಳಿಯ ಈ ಹರಕಲು ಗುಡಿಸಲು ತಕ್ಕುದಲ್ಲ; ಎಲ್ಲೇಗೌಡನೂ ಅನುರೂಪನಾದ ಗಂಡನಲ್ಲ, ಇವಳನ್ನು ಸಾಹುಕಾರರ ತೋಟದಲ್ಲಿಟ್ಟಿದ್ದಾದರೆ ಅವರಿಗೂ ತೃಪ್ತಿ ಲಭಿಸುತ್ತದೆ. ನನಗೂ ಮೆಚ್ಚುಗೆ ದೊರೆಯುತ್ತದೆ. ಇವಳಿಗೂ ಅನುಕೂಲವಾಗುತ್ತದೆ' ಎಂದು ಯೋಚಿಸಿ ಅವರನ್ನೊಪ್ಪಿಸಿ ಪುಟ್ಟಸ್ವಾಮಿಯ ಹತ್ತಿರ ಕರೆದುಕೊಂಡು ಬಂದು ಶಹಭಾಷಗಿರಿ ಪಡೆದುಕೊಂಡು ಮಗನಿಗೂ ವೈನ್ ಅಂಗಡಿಯೊಂದನ್ನು ಗಿಟ್ಟಿಸಿಕೊಂಡು ಬರುತ್ತಾನೆ. ಚೆನ್ನಿ ಕಾಲಕ್ರಮೇಣ ಹೊಂದುಕೊಳ್ಳುತ್ತಾಳೆ.

ಚೆನ್ನೇಗೌಡ ಆರಂಭದಲ್ಲಿ ಮಧ್ಯ ವ್ಯಾಪಾರ ಚೆನ್ನಾಗಿ ನಡೆಸಿ ಕೈತುಂಬಾ ಹಣಮಾಡುತ್ತಾನೆ. ಆದರೆ ಪ್ರಕೃತಿಯಲ್ಲಿ ಗಾಳಿ ಬೆಳಕಿನ ಒಡಲಲ್ಲಿ ದೊರಕುವ ಆನಂದ ಗಾಂಧಿಮಾರ್ಗದಲ್ಲಿ ನಂಬಿಕೆಯುಳ್ಳ ತನ್ನಂಥವರಿಗೆ ಈ ವ್ಯಾಪಾರ ಸಲ್ಲುವುದಿಲ್ಲ ಎಂದು ಜೊತೆಗೆ ಪುಟ್ಟಸ್ವಾಮಿಯ ಕಣ್ಣು ಚೆನ್ನಗೌಡನ ಮನೆಯ ಮೇಲೆಯೇ ಬೀಳುತ್ತದೆ. ಆತನ ವರ್ತನೆಯನ್ನು ಸೊಸೆ ಮಾವನೊಂದಿಗೆ ವಿವರಿಸುತ್ತಾಳೆ. ಇಷ್ಟಕ್ಕೆಲ್ಲ ತಾವೇ ಕಾರಣರೆಂಬ ಚಿಂತೆ ಮನಸ್ಸಿಗಂಟುತ್ತದೆ. ಚನ್ನೇಗೌಡ ದಂಪತಿ ಹಳ್ಳಿಯ ತೋಟದ ಮನೆಗೆ ವಾಪಸ್ಸಾಗುತ್ತಾರೆ. ಎರಡು ವರ್ಷಗಳ ನರಕ ವಾಸದಿಂದ ವಿಮುಕ್ತರಾಗಿ, "ಸ್ವಾತಂತ್ರ್ಯದ ಸ್ವರ್ಗಕ್ಕೆ ತಾಯಿ ಮಡಿಲಿಗೆ ಮತ್ತೆ ಮರಳಿದ ಅನುಭವವಾಗುತ್ತದೆ. ಮಾನವನ ಸುಖಕ್ಕೆ ಕಾರಣ ಹಣವಲ್ಲ, ಬಂಗಲೆಯಲ್ಲ, ಕಾರಲ್ಲ, ಅಧಿಕಾರವಲ್ಲ, ಬಲಿದೆದೆಗಳ ಮಿಲನವೆಂಬುದು"[೧] ಅವರಿಗೆ ಮನದಟ್ಟಾಗುತ್ತದೆ. ಪ್ರತಿಯೊಬ್ಬರೂ ತಿಳಿದುಕೊಳ್ಳುವ ಅಂಶವಾಗಿದೆ.

**ಯಾವುದು ನ್ಯಾಯ?:** ಈ ಕತೆಯು ವಿವಾಹ ಬಾಹ್ಯ ಸಂಬಂಧವನ್ನು ತಿಳಿಸಿಕೊಡುತ್ತದೆ. ರಂಗೇಗೌಡ ಹೊಸಪಟ್ಟಣ ತಾಲ್ಲೂಕಿನಲ್ಲಿ ಹೆಸರುಮಾಡಿದವರು. ಎಲ್ಲರಿಗೂ ಅವರು ಕೈಲಾದ ಸಹಾಯವನ್ನು ಮಾಡುತ್ತಿದ್ದರು. ಅವರನ್ನು ಕಂಡರೆ ಎಲ್ಲರಿಗೂ ಗೌರವ, ಶೇಕ್‌ದಾರರೂ, ಪೋಲಿಸ್ ಪೇದೆಯಾದರೂ ಸರಿಯೆ ಅನುನಯದಿಂದಲೋ ಬೆದರಿಕೆಯಿಂದಲೋ ಕೆಲಸ ಮಾಡಿಸಿಕೊಡುತ್ತಿದ್ದರು. ಶಾಸಕರಾದ ತಿರುಮಲಗೌಡ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿ ಜೈಲಿಗೆ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ನಾ ಮಾಡಿದ ಕರ್ಮ, ಪುಟ. ೫೩.

ಹೋಗಿಬಂದಿದ್ದರು. ರಂಗೇಗೌಡನಿಗೆ ಅವರ ಬಗ್ಗೆ ಗೌರವ. ಎಸ್ಸೆಸ್ಸೆಲ್ಸಿ ಓದುವಾಗಲೇ ಕೆಂಪಮ್ಮನೊಂದಿಗೆ ಮದುವೆ ನಡೆದುಹೋಗುತ್ತದೆ. ಗುಮಾಸ್ತಗಿರಿ ರಾಜೀನಾಮೆ ಕೊಡುತ್ತಾನೆ. ಉದ್ಯೋಗಂ ಪುರುಷ ಲಕ್ಷಣಂ' ಎಂಬಂತೆ ಗಂಡಸ್ಸಿಗೊಂದು ಕೆಲಸವಿಲ್ಲದಿದ್ದರೆ ಸಮಾಜದಲ್ಲಿ ತನಗೆ ಯಾವುದೇ ಸ್ಥಾನಮಾನ ಸಿಗುವುದಿಲ್ಲವೆಂದು ತಿರುಮಲೇಗೌಡರೊಡನೆ ಮಾತಾಡಿ ಔಷಧಿ ಅಂಗಡಿಯಿಡುವುದಕ್ಕೆ ಬ್ಯಾಂಕಿನಿಂದ ಸಾಲ ತೆಗೆದುಕೊಡುತ್ತಾರೆ. ನುರಿತ ಕಾಂಪೌಂಡರೊಬ್ಬರನ್ನು ನೇಮಿಸಿಕೊಂಡು ವೈದ್ಯವೃತ್ತಿ ಪ್ರಾರಂಭಿಸುತ್ತಾರೆ.

ತಮ್ಮಣ್ಣ ರಂಗೇಗೌಡನ ಸ್ನೇಹಿತ. ಸಬ್‌ರಿಜಿಸ್ಟ್ರಾರ್ ಕಛೇರಿಯಲ್ಲಿ ಗುಮಾಸ್ತ. ಆತನ ಹೆಂಡತಿ ಕಮಲ ಏಳೆಂಟು ವರ್ಷವಾದರೂ ಅವರಿಬ್ಬರಿಗೂ ಮಕ್ಕಳಿರುವುದಿಲ್ಲ. ಈತ ಕೆಲಸದಲ್ಲಿ ಪ್ರಾಮಾಣಿಕ ವ್ಯಕ್ತಿ. ಲಂಚಗುಳಿತನವೆಂದರೇನು ಎಂಬುವುದೇ ಗೊತ್ತಿರುವುದಿಲ್ಲ. ಒಳ್ಳೆಯವರಿಗೆ ಕಾಲವಿಲ್ಲವೆನ್ನುವುದು ಈ ಕಾರಣಕ್ಕೆ ತಮ್ಮಣ್ಣ ರಂಗೇಗೌಡನನ್ನು ನೋಡಲು ಬರುತ್ತಾನೆ. ಆಗ ತಾನು ಕೆಲಸ ಬಿಡುವ ನಿರ್ಧಾರವನ್ನು ತಿಳಿಸಿದಾಗ ಈಗಿನ ಕಾಲದಲ್ಲಿ ಲಂಚವನ್ನು ತೆಗೆದುಕೊಳ್ಳಬೇಕು. ತೆಗೆದುಕೊಳ್ಳದಿದ್ದಕ್ಕೆ ನಾನು ಲೋಕಾಯುಕ್ತರ ಕೈಗೆ ಸಿಕ್ಕಿಕೊಂಡಿದೆಯೆಂದು, "ನೋಡು ತಮ್ಮು, ದೇವರು ಹಂದಿಯಾಗಿ, ಮೀನಾಗಿ ಹುಟ್ಟಿದ ಅಂತಾರೆ, ಧರ್ಮೋದ್ಧಾರಕ್ಕಾಗಿ, ಅವನು ಲಂಚದ ರೂಪದಲ್ಲೂ ಹುಟ್ಟಬಾರದೇಕೆ? ಜಗತ್ತಿನ ಉದ್ಧಾರಕ್ಕಾಗಿ ಅವನು ಯಾವ ಯಾವ ರೂಪದಲ್ಲಿ ಹುಟ್ಟಾನೋ ನಮ್ಮಂಥ ನರರಿಗೆ ಅರ್ಥವಾಗೋಲ್ಲ, ಲಂಚ ತಕ್ಕೊಂಡವರು ಎಷ್ಟು ಅದ್ದೂರಿಯಾಗಿ ಬದುಕುತ್ತಾ ಇದ್ದಾರೆ. ನೀನೇ ನೋಡ್ತಾ ಇದ್ದೀಯಲ್ಲ, ಬಂದದ್ದರಲ್ಲಿ ಒಂದು ಭಾಗನ ತಿರುಪತಿ ತಿಮ್ಮಪ್ಪನಿಗೋ, ಧರ್ಮಸ್ಥಳಕ್ಕೋ, ಮಲೆಮಾದೇಶ್ವರನಿಗೋ ಕೊಟ್ಟರಾಯ್ತು' ಕಾಶಿಗೆ ಹೋಗ್ಬಂದರಾಯಿತು. ಲಂಚದ ಕೊಳೆ ತಾನಾಗಿಯೇ ಹರಿದುಹೋಗ್ತದೆ?"[೧] ಈತನು ಹೇಳುವುದನ್ನು ನೋಡಿದರೆ ನಮ್ಮ ಇಂದಿನ ರಾಜಕೀಯ ಪರಿಸ್ಥಿತಿ ಕಣ್ಣಿಗೆ ಕಟ್ಟುತ್ತದೆ.

ಇಲ್ಲಿ ರಂಗಣ್ಣ ತಮ್ಮಣ್ಣನಿಗೆ ಮಿತ್ರದ್ರೋಹ ಮಾಡಿದ ನೆನಿಸಿದರೂ ಆತ ಸ್ನೇಹಿತನ ಹೆಂಡತಿಗೆ ಮೋಸಮಾಡಲಿಲ್ಲವಲ್ಲ ಕೊನೆಗೆ ಆಕೆಯ ಕೈಯಿಡಿಯುತ್ತಾನಲ್ಲವೆ?

**ಪತ್ರವೊಂದರ ಆತ್ಮಕಥೆ:** ಈ ಕತೆಯು ನಾಲ್ಕು ದಶಕಗಳಷ್ಟು ದೀರ್ಘಕಾಲ ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ಸಕ್ರೀಯವಾಗಿ ತೊಡಗಿಸಿಕೊಂಡಿದ್ದ ದೇಜಗೌ ಅವರಿಗೆ, ಆ

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಯಾವುದು ನ್ಯಾಯ, ಪುಟ. ೫೮.

ಕ್ಷೇತ್ರದ ಅಧೋಗತಿ, ನೈತಿಕ ಮೌಲ್ಯಗಳ ಕುಸಿತ ಅಪಾರ ವ್ಯಥೆಯನ್ನು ಹತಾಶೆಯನ್ನುಂಟು ಮಾಡುತ್ತದೆ. ಇಂಥ ಮೌಲ್ಯಗಳ ವಿಕೃತ ಸ್ವರೂಪದ ಭೀಕರತೆಯನ್ನು ಚಿತ್ರಿಸುವ ಹಲವಾರು ಕಥೆಗಳು ಈ ಸಂಕಲನದಲ್ಲಿ ಕಂಡುಬರುತ್ತದೆ. ಆಡಳಿತದ ಭ್ರಷ್ಟಚಾರ ನಿಧಾನಗತಿ, ನಿಷ್ಕ್ರಿಯತೆಗಳು, ಶೈಕ್ಷಣಿಕ ಕ್ಷೇತ್ರದ ಪ್ರಗತಿಗೂ ಹೇಗೆ ಬಾಧಕವಾಗಿದೆ ಎಂಬುದನ್ನು ತುಂಬಾ ಮನೋಹರವಾಗಿ ಚಿತ್ರಿಸಿದ್ದಾರೆ.

ದೇಜಗೌರವರು ಹಿಂದುಳಿದವರ ವಸತಿ ವಿದ್ಯಾರ್ಥಿನಿಲಯ ಸ್ಥಾಪಿಸುವುದಕ್ಕೆ ಈ ವಿಷಯ ಸರ್ಕಾರಕ್ಕೆ ಮುಟ್ಟಿಸಿ ಅನುಮತಿಗಾಗಿ ಬರೆದ ಪತ್ರ ಇದಾಗಿದೆ. ಅಂಚೆಯವನು ಆ ಕಾಗದಪತ್ರವನ್ನು ಚೀಲದೊಳಗೆ ಬೀಸಾಡಿದ. ಪತ್ರ ಬೆಂಗಳೂರು ತಲುಪಿ, ವಿಧಾನಸೌಧವನ್ನು ಹೊಕ್ಕಿದೆ ಭಾಗ್ಯ ಎಂದುಕೊಳ್ಳುತ್ತಾರೆ. ಅಂಚೆಯವ ಸ್ವೀಕೃತಿ ಪತ್ರಕ್ಕೆ ಸಹಿ ಹಾಕಿ, ಮಂತ್ರಿಗಳ ಆಪ್ತಕಾರ್ಯದರ್ಶಿಗಳಿಗೆ ವರ್ಗಾಯಿಸುತ್ತಾನೆ. ರಾಜಕೀಯ ಪುಢಾರಿಯೊಬ್ಬ ಎಸೆದು, ನಂತರ ಜವಾನನೊಬ್ಬ ಕಚೇರಿಯ ಗುಮಾಸ್ತನಿಗೆ ತಲುಪಿಸುತ್ತಾನೆ. ಆತ ಅದನ್ನು ಒಂದು ಹಳೆಯ ಕಡತದಲ್ಲಿ ಕಟ್ಟಿಟ್ಟು ನೋಂದಣಿ ಮುಖಾಂತರ ಕಳಿಸಿಕೊಡುತ್ತಿದ್ದ. ಕಾದುಕಾದು ಉತ್ತರ ಬರದಿದ್ದಾಗ ಮಂತ್ರಿಯವರನ್ನೇ ಭೇಟಿಮಾಡುವುದೆಂದು ವಿಧಾನಸೌಧಕ್ಕೆ ಬರುತ್ತಾರೆ. ಮಂತ್ರಿಗಳನ್ನು ಕುರಿತು ಮಾತನಾಡಿದಾಗ ನನಗೆ ಯಾವ ಪತ್ರ ತಲುಪಿಲ್ಲವೆಂದು. ಗುಮಾಸ್ತ ಬಂದು ಹಿಂದಿನ ಪತ್ರದ ನಕಲಿದ್ದರೆ ಕೊಟ್ಟು ಹೋಗಿ ಎಂದು ಸಲಹೆ ನೀಡುತ್ತಾನೆ. ನಕಲಿಪತ್ರವೊಂದನ್ನು ಕಾರ್ಯದರ್ಶಿಗೆ ಕೊಟ್ಟು ಅದರ ಮೇಲೆ ಸಹಿ ಹಾಕಿ ಗುಮಾಸ್ತನ ಕಡೆಗೆ ಕೊಡುತ್ತಾರೆ. ಜವಾನನೊಬ್ಬ "ಕಾಂಚಾಣಂ ಕಾರ್ಯಸಿದ್ಧಿ"[೧] ಎಂದು ಹೇಳಿದಾಗ ದೇಜಗೌರವರಿಗೆ ಅರ್ಥವಾಗುತ್ತದೆ. ಆದರೆ ಅವರು ದಾರಿ ತಪ್ಪುವವರಲ್ಲ. ಈ ಪತ್ರವನ್ನು ದೆಹಲಿಗೆ ರವಾನಿಸುತ್ತಾರೆ.

ರಾಷ್ಟ್ರದ ರಾಜಧಾನಿಯ ವ್ಯವಹಾರಗಳನ್ನು ತಿಳಿಯುವ ಕುತೂಹಲ ಪತ್ರಕ್ಕೆ ವಿಮಾನದಲ್ಲಿ ಹಾರಾಡುವುದು, ಅಪರಿಚಿತರೊಡನೆ ಅನ್ಯಭಾಷೆಯ ಪತ್ರದ ಗೆಳೆಯರೊಂದಿಗೆ ಕಾತರತೆ ಇವೆಲ್ಲ ದೊರೆತದ್ದು ಗುರುವಿನಿಂದಲೇ ಭಾಷೆಯ ತೊಡಕು ಬೇರೆ. ತಮ್ಮ ಭಾಷೆಯ ಮೂಲಕ ಅನ್ಯ ಭಾಷೀಯರನ್ನು ಗುಲಾಮೀಕರಿಸಿಕೊಳ್ಳುವುದು. ಅಲ್ಲದೇ ಕೇಂದ್ರದಲ್ಲಿ ದೊರೆಯುವ ಸವಲತ್ತುಗಳೆಲ್ಲ, ಒಂದು ಭಾಷೆಯವರಿಗೆ ಮಾತ್ರ ಮೀಸಲು ಕೇಂದ್ರದಲ್ಲಿ ಯಾವ ಪಕ್ಷ ಆಡಳಿತ ನಡೆಸುತ್ತದೆಯೋ, ಅದೇ ಪಕ್ಷ ರಾಜ್ಯದಲ್ಲಿಯೂ ಆಡಳಿತ ನಡೆಸುತ್ತಿದ್ದರೆ ಮಾತ್ರ

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಪತ್ರವೊಂದರ ಆತ್ಮಕಥೆ, ಪುಟ. ೬೮.

ಹೆಚ್ಚು ಸವಲತ್ತುಗಳು ರಾಜ್ಯಕ್ಕೆ ದೊರೆಯುತ್ತದೆ. ಕರ್ನಾಟಕ ಸರ್ಕಾರದ ಕಾವಲಧಿಕಾರಿಯೊಬ್ಬ ನನ್ನ ಮೇಲೆ ಕಣ್ಣಾಡಿಸಿದ, 'ಈ ವರ್ಷದ ಬಡ್ಜೆಟ್ಟಿನ ಹಣ ಮುಗಿದು ಹೋಗಿದೆ ಈ ಬೇಡಿಕೆಯನ್ನು ತಿರಸ್ಕರಿಸಬಹುದು' ಎಂದನು.

ದೇಜಗೌರವರೆ ಒಮ್ಮೆ ಹೋಗಿ ಪತ್ರವನ್ನು ನೋಡಿದರು; ಅವರ ಕಣ್ಣಲ್ಲಿ ನೀರು ಬಟ್ಲಾಡುತ್ತದೆ. ಇಂತಹ ಮಹಾನ್ ವ್ಯಕ್ತಿಯಾದ ದೇಜಗೌರವರು ಸಮಜಗೋಸ್ಕರ ಕನ್ನಡ ನಾಡು–ನುಡಿಗೋಸ್ಕರ ತಮ್ಮ ಪ್ರಾಣವನ್ನು ಒತ್ತೆ ಇಟ್ಟಂತಹ ಹಿಂದುಳಿದವರ ಏಳಿಗೆಗಾಗಿ ಹೋರಾಡಿದಂತಹ ಮಹಾನ್ ವ್ಯಕ್ತಿಗೆ ಈ ಸ್ಥಿತಿಯೊದಗಿದರೆ ಮುಂದೆ ಜನಸಾಮಾನ್ಯರ ಗತಿಯೇನೆಂಬುದನ್ನು ಚಿಂತಿಸಬೇಕಾಗುತ್ತದೆ.

**"ಇಜ್ಜೋಡು"**: ಬಲರಾಮೇಗೌಡ ಹಳ್ಳಿಯ ಕುಟುಂಬದಲ್ಲಿ ಹುಟ್ಟಿದವ. ಬಾಲ್ಯದಲ್ಲಿ ಊರಿನ ಸಮೀಪದ ಕುರುಚಲು ಕಾಡಿನಲ್ಲಿ ದನಕುರಿ ಮೇಯಿಸಲು ಪಡ್ಡೆಹುಡುಗಿಯರು ಬಂದಿರುತ್ತಾರೆ. ಗೋಲಿ, ಹರಳುಮಣೆ, ಕಣ್ಣುಮುಚ್ಚಾಲೆ. ಇದರ ಜೊತೆಗೆ ಮದುವೆಯ ಆಟವೂ ಇತ್ತು. ಬಲರಾಮೇಗೌಡನ ಪಾಲಿಗಂತು ಆ ಆಟದ ಕರಿನೆರಳು ವಿಧಿಯ ಶಾಪವೆಂಬಂತೆ ಅವನ ಬದುಕಿನುದ್ದಕ್ಕೂ ಚಾಚಿಕೊಳ್ಳುತ್ತಾನೆ. ಬಿ.ಎ.ಡಿಗ್ರಿ ಮುಗಿಸುತ್ತಾನೆ. ಬಿ.ಎ. ಸ್ನೇಹಿತನಾಗಿದ್ದ ಕುನ್ನೇಗೌಡನ ಭೇಟಿಯಾಗುತ್ತದೆ. ಆತ ಇಷ್ಟಪಟ್ಟು ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಹುದ್ದೆಯನ್ನು ಗಿಟ್ಟಿಸಿಕೊಂಡಿರುತ್ತಾನೆ. ಇವರಿಬ್ಬರು ಒಂದು ಪಾರ್ಕಿನಲ್ಲಿ ಕುಳಿತು ಮಾತನಾಡಿಕೊಳ್ಳುತ್ತಾರೆ. ಹಿಂದೆ ವ್ಯಾಸಂಗ ಮಾಡಬೇಕಾದರೆ ಪ್ರಾಧ್ಯಾಪಕರ ಮನೆಯಲ್ಲಿಯೇ ಇವರಿಬ್ಬರಿಗೂ ಊಟ ಓದು ಮುಗಿದ ನಂತರ ಮತ್ತೆ ಆ ಕಡೆ ಹೋಗಲಿಲ್ಲವೆಂದೋ 'ಊಟಹಾಕೋ ಶಕ್ತೀನ ದೇವರು ಅವರಿಗೆ ನೀಡಿದ್ದ ಹಾಕಿದ್ರು, ಅದೇನು ಮಹಾ? ಎನ್ನುವಾಗ ಉಂಡ ಮನೆಯನ್ನು ಮರೆಯಬಾರದಲ್ಲೆ. ಹೀಗೆ ಮಾತನಾಡುತ್ತಾ ರಸಿಕತೆಯ ಮಾತಾನೆತ್ತಿ ನನ್ನೊಂದಿಗೆ ಬಂದರೆ, ಕಲರ್‌ಫುಲ್ ಜಗತ್ತನ್ನು ಒಂದು ಪೈಸೆ ಖರ್ಚಿಲ್ಲದಂತೆ ಎಲ್ಲ ಅನುಭವಗಳನ್ನು ಅನುಭವಿಸಿದಾಗಲೇ ಜೀವ ಸಾರ್ಥಕ ಎಂದು ಹೇಳಿದಾಗ, ಬಲರಾಮೇಗೌಡನ ಮನಸ್ಸು "ಭೂಮಿಯೊಳಗಣ ಶಾಖ ಒತ್ತಡಗಳಿಂದ ಬಿಸಿನೀರು ಊಟೆಯಾಗಿ ಚಿಮ್ಮುವಂತೆ, ಮನಸ್ಸಿನ ರಸಾತಲದಿಂದ ಲೈಂಗಿಕಪ್ರಜ್ಞೆ ಅದಮ್ಯವೆನ್ನುವಂತೆ ಉಕ್ಕುತ್ತದೆ. ಅವನು ಮೌನವಾಗಿ ಒಡೆಯನನ್ನು ಹಿಂಬಾಲಿಸುವ ಕುರಿಮರಿಯಂತೆ"[೧] ಕುನ್ನೇಗೌಡನ ಹಿಂದೆ ನಡೆಯುತ್ತಾನೆ. ವೈಶ್ಯ ಗೃಹಮಂದಿರಕ್ಕೆ ಕರೆದುಕೊಂಡು ಬಂದಾಗ ಹೆಂಗಳೆಯರಲ್ಲಿ ಸುತ್ತಿದಾಗ ಹೆದರುತ್ತಾನೆ. ನಾನಿರುವಾಗ ನೀನೇಕೆ ಎದರುತ್ತೀಯ,

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಇಜ್ಜೋಡು, ಪುಟ. ೭೩.

ಆ ಸ್ಥಳಕ್ಕೆ ಯಾರ್‍ಯಾರು ಬರುತ್ತಾರೆಂದು ಜೊತೆಗೆ ತನ್ನನ್ನು ನೋಡಿದರೆ ಎಲ್ಲರೂ ಹೆದರುತ್ತಾರೆ. ಆದ್ದರಿಂದ ನಾನು ಈ ಇಲಾಖೆಯನ್ನು ಆರಿಸಿಕೊಂಡಿರುವುದಾಗಿ ಹೇಳುತ್ತಾನೆ. ಕಳ್ಳ ಬಂದು ದೋಚಿಕೊಂಡು ಬಂದ ಮೇಲೆ ಪೊಲೀಸರು ಬರೋದು ಅನ್ನೋ ಹಾಗೆ ಇವರು ಕಳ್ಳರಿಗೂ ಒಮ್ಮೊಮ್ಮೆ ಸಹಾಯ ಮಾಡುವುದಾಗಿ ಅವನ ಬಾಯಿಂದಲೇ ಆಡಿಸಿದ್ದಾರೆ. ತನ್ನ ತಾಯಿ, ತಂಗಿಯ ನೆನಪಾಗಿ ಅಲ್ಲಿಂದ ಹೊರಬರುತ್ತಾರೆ.

ಅಂತೆಯೇ ಬಲರಾಮೇಗೌಡನಿಗೆ ಶಾರದ ಎಂಬ ಹೆಣ್ಣಿನೊಡನೆ ಮದುವೆ ಆಗುತ್ತದೆ. ಆಕೆ ಕನ್ನಡ ಎಂ.ಎ. ಮುಗಿಸಿರುತ್ತಾಳೆ. ಆತನೂ ಎಂ.ಎ. ಮುಗಿಸಿ ಸರ್ಕಾರಿ ಸಣ್ಣ ನೌಕರಿಯೂ ಸಿಗುತ್ತದೆ. ಹೆಂಡತಿ ತನ್ನ ಜೊತೆ ಕರೆದುಕೊಂಡು ಹೋಗದೆ ಮಾವನ ಮನೆಯಲ್ಲೇ ಬಿಡುತ್ತಾನೆ. ಆಗಾಗ ಬಂದಾಗ ಏಕಾಂತಕ್ಕೆ ಅವಕಾಶವಿಲ್ಲದಂತಾಗಿ ಅತೃಪ್ತಕಾಮನೆ ನಿರಾಶೆಗೊಳಿಸುತ್ತದೆ. ಇಬ್ಬರು ಮಕ್ಕಳಾದ ಮೇಲೆ ಅವಳ ಮನಸ್ಸು ಲಾಲನೆಪಾಲನೆಯ ಬಗ್ಗೆ ಮಕ್ಕಳ ಕಾಮಪ್ರೇಮವಾಗಿ ಪರಿಣಮಿಸುತ್ತದೆ. ಅವಳು ಹೆಚ್ಚು ದಿನ ಪೂಜೆ ಪುನಸ್ಕಾರಗಳಲ್ಲಿ ತೊಡಗಿ-ಕೊಳ್ಳುತ್ತಾಳೆ. ತನಗೆ ಸಿಗದ ಸುಖವನ್ನರಸಿ ಎಲ್ಲೆಲ್ಲಿಯೋ ಹೋಗಿಬರುತ್ತಾನೆ. ಬಲರಾಮೇಗೌಡ. ಬ್ರಹ್ಮಕುಮಾರಿ ಸಮಾಜದ ಬಗ್ಗೆ ಆಕರ್ಷಿತಳಾಗುತ್ತಾಳೆ. ಒಂದು ಶಾರದೆ ತನ್ನ ಸವಿಮಾತುಗಳಿಂದ ಗಂಡನನ್ನೊಲಿಸಿಕೊಂಡು ಬ್ರಹ್ಮಕುಮಾರಿಯಲ್ಲಿ ಮೂಲಮಠ ಅಬೂ ಬೆಟ್ಟಕ್ಕೆ ತನ್ನನ್ನು ಮಕ್ಕಳನ್ನು ಕರೆದುಕೊಂಡು ಹೋಗುವುದಾಗಿ ಒಪ್ಪಿಸಿ, ಅಲ್ಲಿಗೆ ಹೋದ ತಕ್ಷಣ ಭಕ್ತಿಯ ಮಾದಕತೆಯಿಂದ ಗಂಡ ಮಕ್ಕಳಾದಿಯಾಗಿ ಮರೆಯುತ್ತಾಳೆ. ವಿಚಿತ್ರ ಪರಿವರ್ತನೆ ಕಾಣುತ್ತದೆ.

"ಮೋಕ್ಷಲಕ್ಷ್ಮಿಯ ಕೃಪೆಯ ಸಂಪಾದನೆಗಾಗಿ ಲೌಕಿಕ ವಾಸನೆಗಳಿಂದ ದೂರವಿರತಕ್ಕದ್ದೆಂದು ಶಾರದೆಯೂ ಕಾಣದ ಲಕ್ಷ್ಮಿಗಾಗಿ ಆಕಾಶದ ಕಡೆಗೆ ಗೋಣು ಚಾಚದೆ ದೈವ ಸಮ್ಮತವಾದ ಸಂಸಾರ ಮಾರ್ಗದ ಮೂಲಕ ಭಗವದಿಚ್ಛೆಯನ್ನು ಪೂರೈಸಬೇಕಾದ್ದು ಮಾನವಧರ್ಮವೆಂದು"[೧] ಬಲರಾಮೇಗೌಡ ಇವರಿಬ್ಬರ ಹರ ವಿರಸ ಮೌನ ದ್ವೇಷಗಳಲ್ಲಿ ಪರಿಣಾಮ ಹೊಂದುತ್ತದೆ. ಈ ಪರಿಣಾಮ ಮಕ್ಕಳ ಮೇಲೆ ಬೀರುತ್ತದೆ.

ಒಂದು ದಿನ ತನ್ನನ್ನು ತಾನು ಅರಿತುಕೊಳ್ಳಲೆಂದು ಮನೆಯಿಂದ ಹೊರಡುತ್ತಾನೆ. ಹಿಂದಿನ ಸಹಪಾಠಿಯೊಬ್ಬ ಸಿಕ್ಕಿ ಮಾತನಾಡಿಸಿದಾಗ ತಾನು ಪಾದಚಾರಿಯಾಗಿ ಸಂಗಮಕ್ಷೇತ್ರಕ್ಕೆ ಹೋಗುತ್ತಿದ್ದೆನೆಂದು ಹೇಳುತ್ತಾನೆ. ಹದಿನೈದು

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಇಜ್ಜೋಡು, ಪಟ. ೭೮.

ಕರೆಸಿಕೊಳ್ಳುತ್ತಾರೆ. ಒಲ್ಲದ ಮನಸ್ಸಿನಿಂದ ಮಗುವಿನ ಕಣ್ಣ್‌ತಪ್ಪಿಸಿ ಊರಿಗೆ ಬರುತ್ತಾಳೆ. ಮಗು ರಾತ್ರಿಯಲ್ಲೆಲ್ಲ ಕನವರಿಸುತ್ತದೆ.

ಕುಮಾರನಿಗೆ ಎರಡು ವರ್ಷ ತುಂಬುತ್ತಿದ್ದಂತೆ ಗಿರಿಜೆ ಮತ್ತೆ ಗರ್ಭಿಣಿಯಾಗುತ್ತಾಳೆ, ಏಳು ತಿಂಗಳಲ್ಲಿ ಆಕೆ ಹೃದಯ ದುರ್ಬಲವಾಗಿ ವೈದ್ಯರಿಗೂ ಇದು ಯಾವ ರೋಗವೆಂಬುದು ಗೊತ್ತಾಗಲಿಲ್ಲ. ವಿಷಯ ತಿಳಿದು ಗಂಗಮ್ಮ ಬರುತ್ತಾಳೆ. ಗಿರಿಜೆ ಏನೋ ಶಾಂತಿ ತಾನು ಹೆಚ್ಚು ದಿನ ಬದುಕುವುದಿಲ್ಲವೆಂದು ಹೇಳುತ್ತಾಳೆ. ನನ್ನ ಪ್ರಾಣವನ್ನೆ ಒತ್ತೆಯಿಟ್ಟು ನಿಮ್ಮ ಆರೈಕೆ ಮಾಡುತ್ತೇನೆನ್ನುತ್ತಾಳೆ. ಮುಂದೆ ನನ್ನ ಮಕ್ಕಳ, ಗಂಡನಿಗೆ ಯಾರು ಗತಿ ಎಂದಾಗ ಮಕ್ಕಳ ತಂದೆಯಾದ ಮಾವಯ್ಯನ ಸುಶ್ರೂಷೆ ನನಗಿರಲಿ ಎನ್ನುತ್ತಾಳೆ. ಗಿರಿಜೆ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಗಿರಿಜೆ ನಿಶ್ಯಕ್ತಿಯ ಜತೆಗೆ, ಪ್ರಜ್ಞೆಯು ಕ್ಷೀಣವಾಗುತ್ತದೆ. ರುದ್ರರಾಧ್ಯ ಎಳನೀರನ್ನು ಮಡದಿಗೆ ಕುಡಿಸುತ್ತಾರೆ. ಮಕ್ಕಳು ಓಡಾಡುವಂತಾದಾಗ ಯಾತ್ರಾ ಸ್ಥಳಗಳಿಗೆ ಹೋಗಿ ಬರೋಣವೆನ್ನುತ್ತಾನೆ. ನಿಮ್ಮ ಇಷ್ಟಾರ್ಥ ಸಿದ್ದಿಸಲೆಂದು ನಾನು ಶಿವನ ಬಳಿ ಪ್ರಾರ್ಥಿಸುತ್ತೇನೆ ಎನ್ನುತ್ತಾಳೆ. ಅವರ ಬಲಗೈಯನ್ನೆಳೆದು ತನ್ನ ಎದೆಯ ಮೇಲಿರಿಸಿಕೊಂಡು 'ಒಂದಲ್ಲ ಒಂದು ದಿನ ಹುಟ್ಟಿದ್ದೆಲ್ಲ ಶಿವನ ಪಾದ ಸೇರಲೇ ಬೇಕು ಸುಖದುಃಖ ಎರಡೂ ಶಾಶ್ವತವಲ್ಲ, ಮನುಷ್ಯನ ಒಳತಿಗೆ ಎರಡೂ ಬೇಕು. ಶಿವಪಾರ್ವತಿಯರು ನನ್ನನ್ನು ಕರೆಯುತ್ತಿದ್ದಾರೆ'[೧] ಎನ್ನುತ್ತಾಳೆ.

ಗಿರಿಜೆಯನ್ನು ಮಕ್ಕಳನ್ನು ಗಂಡನಿಗೊಪ್ಪಿಸಿ ಕಣ್ಮುಚ್ಚಿಕೊಳ್ಳುತ್ತಾಳೆ. ಇಲ್ಲಿ ಜಾತಿ ಅಡ್ಡ ಬಂದರೂ ಮನುಷ್ಯತ್ವದ ಮುಂದೆ ಜಾತಿ ಉಳಿಯದು. ಇವೆರಡು ಮನತೆತನದವರೂ ಗಿರಿಜಮ್ಮನವರ ಇಚ್ಚೆ ನೆರವೇರಿಸುತ್ತಾರೆ. ಸಿದ್ದಗಂಗೆಯಲ್ಲಿ ಗಂಗಮ್ಮನಿಗೆ ಲಿಂಗ ದೀಕ್ಷೆ ನೀಡಿ ಸತಿಪತಿಗಳಾಗುತ್ತಾರೆ. ಹೆಣ್ಣುಮಗುವಿಗೆ ಉಮಾ ಎಂದು ಹೆಸರಿಡುತ್ತಾರೆ. ಮಧ್ಯರಾತ್ರಿಯಲ್ಲೆದ್ದ ಮಗುವನ್ನು ಎಷ್ಟೇ ಸಮಾಧಾನ ಮಾಡಿದರೂ ಅಳುತ್ತದೆ, ತನಗರಿವಿಲ್ಲದಂತೆ ಮಗುವಿನ ಬಾಯಲ್ಲಿ ತನ್ನ ಮೊಲೆಯನ್ನಿಡುತ್ತಾಳೆ ಮಗು ಚೀಪುತ್ತಿದ್ದಂತೆ ಹಾಲೊಸರುತ್ತದೆ, ಗಂಗಮ್ಮನಿಗಾದ ಆನಂತ ಅಷ್ಟಿಷ್ಟಲ್ಲ. ಆ ವೇಳೆಗೆ ಏಳು ತಿಂಗಳ ಗರ್ಭಿಣಿಯಾಗಿರುತ್ತಾಳೆ ಅವಳು ತನಗೆ ಮಗುವಾದರೆ ಆ ಮಕ್ಕಳ ಮೇಲೆ ಪ್ರೀತಿ ಕಡಿಮೆಯಾಗುತ್ತದೆಂದು ತನಗೆ ಮಗುಬೇಡವೆಂದು ನಿರ್ಧರಿಸುತ್ತಾಳೆ. ಆದರೆ ಯಾವುದೇ ಹೆಣ್ಣು ತನ್ನ ಹೊಟ್ಟೆಯಲ್ಲಿದ್ದ ಮಗುವನ್ನು ಸಾಯಿಸುವುದಕ್ಕೆ ನಿರ್ಧಾರ ಮಾಡುವುದಿಲ್ಲ. ಆದರೆ ದೊಡ್ಡ ಮನಸ್ಸು ಮಾಡಿ ಯಾರಿಗೂ ಹೇಳದಂತೆ ತನ್ನ ಗಂಡ ಎಷ್ಟೇ ಸಮಾಧಾನ ಮಾಡಿ ಆ ಮಕ್ಕಳನ್ನು ಹಾಸ್ಟೆಲ್ಲಿಗೆ ಸೇರಿಸುವುದಾಗಿ ಭರವಸೆ ನೀಡಿದ್ದಾನೆ. ಆ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ತ್ಯಾಗ, ಪುಟ. ೮೮.

ಸ್ಥಾನದಲ್ಲಿ ಬೇರೊಂದು ಹೆಣ್ಣು ಮಗಳಿದ್ದರೆ ಅದನ್ನೊಪ್ಪಿಕೊಳ್ಳುತ್ತಿದ್ದಾಳೆನೋ ಆ ಮಗು ಗರ್ಭದಲ್ಲಿಯೇ ಸಾವನ್ನಪ್ಪುತ್ತದೆ. ಅದಕ್ಕೆ ಕಾರಣ ಗಂಗಮ್ಮಳೆ. ಇವಳ ತ್ಯಾಗದ ಗುಣವನ್ನು ಮೆಚ್ಚುವಂತಹದ್ದು. ಇಂತಹ ಗುಣ ಬೇರೆ ಹೆಣ್ಣುಮಕ್ಕಳಲ್ಲಿ ಕಾಣಲಾರೆವು. ಇಂತಹ ತ್ಯಾಗಮಯಿಗೆ ಆಗದವರು ಇವಳ ಮೇಲೆ ಗೂಬೆ ಕೂರಿಸುತ್ತಾರೆ. ಆಸ್ತಿಗೋಸ್ಕರ ಬೇರೆ ಜಾತಿಯವನನ್ನು ಮದುವೆಯಾದಳು ಎಂದು ಮಕ್ಕಳ ಕಿವಿಗಿಂಡುತ್ತಾರೆ. ಮಕ್ಕಳ ಮದುವೆಯನ್ನು ಮಾಡಿ ಆಸ್ತಿಯನ್ನು ಮೂರುಭಾಗ ಮಾಡಿ ಇಬ್ಬರಿಗೂ ಹಂಚಿ ಒಂದು ಭಾಗ ತಾವಿಟ್ಟುಕೊಳ್ಳುತ್ತಾರೆ. ಹೀಗಿದ್ದೂ ತಾಯಿ–ತಂದೆಯರ ಮೇಲಿನ ಅನುಮಾನ ಕಡಿಮೆಯಾಗುವುದಿಲ್ಲ. ಈ ತಾಯಿಯ ತ್ಯಾಗಕ್ಕೆ ಮಕ್ಕಳು ಕೊಟ್ಟ ಉಡುಗೊರೆ ಏನು? ಈ ಮಧ್ಯ ರುದ್ರಾರಾಧ್ಯರು ಅಸ್ವಸ್ಥರಾಗುತ್ತಾರೆ. ತೀರ್ಥಯಾತ್ರೆಯ ಕನಸ್ಸು ಈಡೇರುವುದಿಲ್ಲ. ರುದ್ರಯ್ಯನವರು ಸಾವನ್ನಪ್ಪುತ್ತಾರೆ. ಅಕ್ಕ ಮತ್ತು ಗಂಡನ ಕರೆಗಾಗಿ ಕಾಯುತ್ತ ಗಂಗಮ್ಮ ದಿನ ಕಳೆಯುತ್ತಿರುತ್ತಾಳೆ.

ಅವಳ ತ್ಯಾಗಮಯ ಗುಣಕ್ಕೆ ಬೆಲೆಕಟ್ಟಲಾದೀತೇ?

**"ಎಂಥವನು ಹೇಗಾದ"**: ಈ ಕತೆಯು ಪ್ರಾಧ್ಯಾಪಕನ ಅಳಿಯರಿಬ್ಬರ ಕಾಮವನ್ನು ಕುರಿತು ತಿಳಿಸುತ್ತದೆ. ಡಾ.ರಾಜನಾರಾಯಣ ಗುಪ್ತರವರು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಸಾಹಿತ್ಯದ ಬಗ್ಗೆ ಆಸಕ್ತಿ ಹೊಂದಿರುತ್ತಾರೆ. ಸಾಹಿತ್ಯವನ್ನು ಬಿಟ್ಟು ವಿಜ್ಞಾನದ ಕಡೆಗೆ ತಿರುಗುತ್ತದೆ. ವಿಶ್ವವಿದ್ಯಾನಿಲಯದ ಜೀವವಿಜ್ಞಾನ ವಿಭಾಗದ ಪ್ರಾಧ್ಯಾಪಕರಾಗುತ್ತಾರೆ. ಮಹಾವಾಗ್ಮಿಯರೆಂದು ವಿದ್ಯಾರ್ಥಿ ಪ್ರಿಯ ಪ್ರಾಧ್ಯಾಪಕರೆಂದು, ಕರ್ತವ್ಯನಿಷ್ಠರೆಂದು ಹೆಸರು ಸಂಪಾದಿಸುತ್ತಾರೆ. ತಳಿ ವಿಜ್ಞಾನದ ಬಗ್ಗೆ ನಡೆಸಿದ ಸಂಶೋಧನೆ ಎಲ್ಲ ವಿಜ್ಞಾನಿಗಳ ಗಮನ ಸೆಳೆಯುತ್ತದೆ. ಕೇರಳದ ವಿಜಯ ಎಂಬ ವಿದ್ಯಾರ್ಥಿನಿ ಬೆರಕೆ ತಳಿಗೆ ಬಗ್ಗೆ ಸಂಶೋಧನೆ ನಡೆಸಲು ಬರುತ್ತಾಳೆ. ಭಯಲಜ್ಜೆಗಳಿಂದಲೇ ಅವರ ಬಳಿ ವರ್ತಿಸುತ್ತಿರುತ್ತಾಳೆ. ಗುಪ್ತರು ತಮಗರಿವಿಲ್ಲದಂತೆ ಅವಳೊಂದಿಗೆ ಚೆಲ್ಲಾಟವಾಡಲಾರಂಭಿಸುತ್ತಾರೆ. ಅವರಿಬ್ಬರೂ ಅರಿವಿಲ್ಲದಂತೆ ಅವರ ನಡೆ ನುಡಿಗಳಲ್ಲಿ ಬದಲಾವಣೆಗೊಳ್ಳುತ್ತದೆ. ಕೇರಳದ ವಿಚಾರಗೋಷ್ಠಿಯಲ್ಲಿ ಭಾಗವಹಿಸುತ್ತಾರೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ಗಳಿಸಿರುವ ನಾನು ಸಂಸೋಧನೆಯಲ್ಲಿದ್ದುಕೊಂಡು ಸುಖ ಹಾಳುಮಾಡಿಕೊಳ್ಳ ಬಾರದೆಂದು ಯೋಚಿಸಿ ತನ್ನ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳು ತಯಾರಿಸಿದ ಪ್ರಬಂಧಗಳನ್ನೇ ಗೋಷ್ಠಿ ಸಮಾರಂಭಗಳಲ್ಲಿ ಓದಿದರಾಯಿತೆಂದುಕೊಳ್ಳುತ್ತಾರೆ.

ವಿಜಯಳನ್ನು ವಿದೇಶಕ್ಕೆ ಕಳಿಯಿಸಿಕೊಡಲು ಮುಂಬಯಿಗೆ ಹೋಗುತ್ತಾರೆ. ಸಂಶೋಧನೆಯ ಬಗ್ಗೆ ಆಸಕ್ತಿ ಕಡಿಮೆಯಾಗತೊಡಗುತ್ತದೆ. ಪತ್ರಿಕೆಗಳಿಗೆ

ಲೇಖನಗಳನ್ನು ಬರೆಯುತ್ತಾರೆ. ಪತ್ರಿಕಾ ಪ್ರಚಾರ ಗಿಟ್ಟಿಸಿಕೊಳ್ಳುತ್ತಾರೆ. ಹರಟೆಗೋಸ್ಕರ ಪ್ರಯೋಗಾಲಯಕ್ಕೆ ಹೋಗಿ ಬರುತ್ತಾರೆ. ವಿಷಯ ಬಣ್ಣ ಬಣ್ಣದ ರೆಕ್ಕೆ ಪುಕ್ಕಗಳನ್ನು ಪಡೆದುಕೊಳ್ಳುತ್ತದೆ. ಗುಪ್ತರ ಹೆಂಡತಿ ರಾಜಮ್ಮ ಸಾಧ್ವಿಶಿರೋಮಣಿ, ದಐವಭಕ್ತಿಯುಳ್ಳವಳು, ಗುಪ್ತರಂತಹ ಪತಿಯನ್ನು ಪಡೆದದ್ದು ತನ್ನ ಪುಣ್ಯವೆಂದುಕೊಳ್ಳುತ್ತಾಳೆ. ಪತಿಯ ರಸಿಕತೆಯ ಸುದ್ದಿ ಕಿವಿಗೆ ಬಿದ್ದಾಗ

"ನಕ್ಕರೆ ನಗಲೆವ್ವ ನಗೆ ಮುಖದಕ್ಕಾದಿಗೆ
ನಾಮುಚ್ಚಿ ಮುಡಿದ ಪರಿಮಳದಾಹೂವ
ಅವಳೊಂದು ಬಾರಿ ಮುಡಿಯಲಿ"೧

ತಾನು ಪತಿಗನುರೂಪೆಯಲ್ಲವೆಂಬ ಭಾವನೆ ಅವಳಲ್ಲಿದ್ದಿರಬಹುದು.

ವರ್ಗಾವಣೆಗೊಂಡ ಮಗಳು ಅಳಿಯ ಗುಪ್ತರ ಮನೆಯಲ್ಲೆ ಟಿಕಾಣಿ ಹೂಡುತ್ತಾರೆ. ಗುಪ್ತರು ತೋಟದ ಕೆಲಸಕ್ಕೆಂದು ಒಂದು ಬಡ ಸಂಸಾರವನ್ನಿರಿಸಿ ಕೊಂಡಿದ್ದು, ಅವರಲ್ಲಿ ಗಂಡ ಹೆಂಡತಿ ಮತ್ತು ಮಗಳು. ಗಂಡ ಕೂಲಿ ಕೆಲಸಕ್ಕೆ ಹೋದರೆ ತಾಯಿ ಮಗಳಿಬ್ಬರು ಗುಪ್ತರ ಮನೆಗೆಲಸದಲ್ಲಿ ತಲ್ಲೀನರಾಗಿರುತ್ತಾರೆ. ಮಗಳು ಹದಿನೆಂಟರ ಪ್ರಾಯದ ಮಗಳು ತಿಮ್ಮಿ. ಬಣ್ಣದಲ್ಲಿ ಎತ್ತರ ರೂಪದಲ್ಲಿ ಉಬ್ಬುತಗ್ಗುಗಳಲ್ಲಿ ಪಟ್ಟಣದ ಹೆಣ್ಣುಗಳಿಲ್ಲಲ್ಲದ ಕನಸು ಕಾಣುತ್ತಿರುತ್ತದೆ. ಗುಪ್ತರು ಅಳಿಯರಿಬ್ಬರು ಕಣ್‌ತಪ್ಪಿಸಿ ಅವಳನ್ನು ಬುಟ್ಟಿ ಹಾಕಿಕೊಳ್ಳುವುದರಲ್ಲಿ ಹವಣಿಸುತ್ತಿರುತ್ತಾರೆ. ತಿಮ್ಮಿಗೆ ಮುಟ್ಟು ನಿಲ್ಲುತ್ತದೆ. ವಿಷಯ ಮನೆಯವರಿಗೆ ತಿಳಿಯುತ್ತದೆ. ಮಾವ, ಅಳಿಯರಿಬ್ಬರು ಅವಳು ಎಲ್ಲೆಲ್ಲಿ ಹೋಗಿ, ಯಾರ ಜೊತೆ ಮಲಗಿಬಂದಳೆಂದು ಬೈಯುತ್ತಾರೆ. ಒಂದಷ್ಟು ದುಡ್ಡು ನೀಡಿ ಮನೆಯಿಂದ ಹೊರಗೋಡಿಸುವುದಾಗಿ ಇಲ್ಲದಿದ್ದರೆ ಪೊಲೀಸರಿಗೆ ದೂರು ನೀಡುವುದಾಗಿ ಬೆದರಿಕೆಯೊಡ್ಡುತ್ತಾರೆ. ಪಾಪದ ಹಣ ಬೇಡವೆಂದು ಮನೆಬಿಡಲು ನಿರ್ಧರಿಸುತ್ತಾರೆ. ಮಾರನೆಯ ದಿನ ಊರ ಮುಂದಿನ ಕೆರೆಯಲ್ಲಿ ತಿಮ್ಮಿಯ ದೇಹ ತೇಲುತ್ತಿರುತ್ತದೆ. ತಂದೆತಾಯಿಯರ ವಿಳಾಸ ದೊರೆಯದು ರಾಮದಾಸರು ಬೇರೆ ಮನೆಗೆ ಹೋಗುತ್ತಾರೆ. ಗುಪ್ತರ ಭೀಗ ಜೀವನ ಮುಂದುವರಿಯುತ್ತದೆ. ಇದಕ್ಕೆ ಅಂತಿಮವೆನ್ನುವುದೇ ಇಲ್ಲವೇ ಬಡ ಜೀವ ಹೆಣ್ಣು ಮಗಳೊಂದನ್ನು ಜೀವ ತೆಗೆದುಕೊಳ್ಳುತ್ತಾರೆ. ಇಲ್ಲಿ ಆ ಬಡ ತಾಯಿ–ತಂದೆಯರು ಪ್ರಾಣಕ್ಕಿಂತ ಮಾನ ಮರ್ಯಾದೆ ಹೆಚ್ಚು ಎಂದು ತಿಳಿದವರು. ರಾಮದಾಸ, ಗುಪ್ತರಿಗಿಂತ ಇವರು

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಎಂಥವನು ಹೇಗಾದ, ಪುಟ. ೯೫.

ಗುಣಶೀಲರು. ವಿದ್ಯಾವಂತರಿಗಿಂತ ಉತ್ತಮರಾಗಿರುವುದು ಕಂಡುಬರುತ್ತದೆ. ಪ್ರಾಧ್ಯಾಪಕರಾಗಿದ್ದುಕೊಂಡು ನೂರಾರು ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗ ಬೇಕಾದವರೇ ಇಂತಹ ದಾರಿ ಹಿಡಿದರೆ ನಾಳೆಯ ಮುಂದಿನ ಪ್ರಜೆಗಳ ಗತಿ ಏನಾಗಬೇಕು? ಇವರು ವಿದ್ಯಾವಂತರಾದರೂ ಅವಿದ್ಯಾವಂತರಿಗಿಂತ ಕೀಳಲ್ಲವೇ? ಹಣ, ಪ್ರತಿಷ್ಠೆ, ಅಧಿಕಾರವನ್ನು ಗುಪ್ತರು ತಮ್ಮ ಕಾಮದ ದಾಹಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. ಹೇಗಿದ್ದಂತಹ ವ್ಯಕ್ತಿ ಹೇಗಾದರಲ್ಲವೇ?

**"ಮನಃಸಾಕ್ಷಿ"**: ಈ ಕತೆಯು ಲಿಂಗಣ್ಣ ಸ್ವಭಾವತಃ ಸಾತ್ವಿಕ ಧರ್ಮದವರು. ಇವರ ಕೆಲಸ ಬಸ್ ಕಂಡಕ್ಟರ್, ತನ್ನ ಹೆಂಡತಿಯ ಪ್ರಣಯಲೀಲೆ ಪ್ರಿಯಕರ ಶ್ರೀಕಂಠನ ಜೊತೆ ಕೂಡಿಕೆ ಮಾಡಿಸುವುದು ಇವೆಲ್ಲ ವಿಫಲ ದಾಂಪತ್ಯದ ವಸ್ತುವಾಗಿ ಕಥೆ ತುಂಬ ಮನೋಜ್ಞವಾಗಿ ಮೂಡಿದೆ. ಒಟ್ಟಿನಲ್ಲಿ ಹಲವಾರು ಕಥೆಗಳಲ್ಲಿ ಕಾಮ ವ್ಯಕ್ತಿಗತ ಸಮಸ್ಯೆ ಎಂದು ಮೇಲುನೋಟಕ್ಕೆ ತೋರಿದರೂ ಅದು ಸಾಮಾಜಿಕ ಸಮಸ್ಯೆಯೂ ಆಗಿರುವುದನ್ನು ಬಹಳ ಗಂಭೀರವಾಗಿ ಕತೆಗಾರರು ಗಮನಿಸಿದ್ದಾರೆ.

ಬಸ್ಸಿನ ಚಾಲಕ ದುಡ್ಡು ಸಂಪಾದನೆಯ ಮಾರ್ಗವನ್ನು ತಿಳಿಸುತ್ತಾನೆ. ಪ್ರಯಾಣಿಕರು ಕೇಳುವವರೆಗೆ ಚಿಲ್ಲರೆ ಕೊಡದಿರುವುದು. ಇದೆಲ್ಲ ಪ್ರತಿನಿತ್ಯ ನೋಡುತ್ತೇವೆ. ಇನ್ಸ್‌ಪೆಕ್ಟರ್‌ಗೆ ಆಗಾಗ್ಗೆ ಕೈಬಿಸಿ ಮಾಡದಿದ್ದರೆ ಕೆಲಸಕ್ಕೆ ಕುತ್ತುಂಟಾಗಬಹುದು. ಇಲ್ಲವೇ ವರ್ಗಾವಣೆಯಾಗಬಹುದೆಂದು ಸರ್ಕಾರಕ್ಕೆ ಮತ್ತು ಪ್ರಯಾಣಿಕರಿಗೆ ಮೋಸಮಾಡುವುದು ಸರಿಯಲ್ಲ. ವಿದೇಶದಲ್ಲಿ ಅದನ್ನು ಟಿಪ್ಸ್ ಎಂದು ಕರೆದ ಹಾಗೆ ಕಾಣಿಕೆ ಎಂದು ಕರೆಯಬಹುದೆಂದಾಗ 'ಎಲ್ಲ ತಪ್ಪು ಮಾಡ್ತಾರೆ ಅಂತ ನಾನು ಮಾಡಿದರೆ ದೇವರು ಮೆಚ್ಚುವನೇ' ಎಂದು ಚಾಲಕನಿಗೆ ಹೇಳುತ್ತಾನೆ. ಚಾಲಕನ ಸಲಹೆಯಂತೆ ಕದಿಯುತ್ತ ತನ್ನ ದಿನ ಬಳಕೆಗೆಷ್ಟು ಬೇಕೋ ಅಷ್ಟನ್ನೇ ತಾನಿಟ್ಟುಕೊಂಡು ಚಾಲಕನಿಗೊಪ್ಪಿಸುತ್ತಾನೆ. ತದನಂತರ ತಿಳುವಳಿಕೆ ಬಂದು ಅವನಿಗೆ ಕೊಡುವುದನ್ನು ಕಡಿಮೆ ಮಾಡಿದಾಗ ಆತನ ವಿರುದ್ಧವಾಗುತ್ತಾನೆ.

ಮಾದಯ್ಯ ಮಗಳು ಲತಾಳನ್ನು ಲಿಂಗಣ್ಣನೊಂದಿಗೆ ಮದುವೆ ಏರ್ಪಡಿಸುತ್ತಾನೆ. ಆಕೆ ಪಕ್ಕದ ಬೀದಿ ಶ್ರೀಮಂತನೊಬ್ಬನ ಮಗ ಶ್ರೀಕಂಠನನ್ನು ಮದುವೆಯಾಗುವುದಾಗಿ ತಿಳಿಸಿದಾಗ ತಿಂಗಳಿಗೆ ಸರಿಯಾಗಿ ಸಂಬಳ ಸಿಗುತ್ತದೆ, ಒಂದು ಸಲ ಮಳೆಬರದಿದ್ದರೆ ಬೆಳೆ ಇಲ್ಲ, ಕೈ ತುಂಬಾ ಸಂಪಾದನೆ ಮಾಡುತ್ತೇನೆಂದು ಮಗಳಿಗೆ ಬುದ್ಧವಾದ ಹೇಳಿ ಮದುವೆ ಮುಗಿಸುತ್ತಾನೆ. ತೋಟದ ಉಸ್ತುವಾರಿಕೆಗೆಂದು ಹೋದಾಗ ಶ್ರೀಕಂಠ ಜೊತೆ ಸಂಪರ್ಕವೇರ್ಪಡಿಸಿ ಕೊಳ್ಳುತ್ತಾಳೆ. ಈ ವಿಷಯ ಆಳುಕಾಳುಗಳಿಗೂ ಗೊತ್ತಿರುತ್ತದೆ. ಮದುವೆಯಾದ ಒಂದು ವರ್ಷದೊಳಗೆ ಒಂದು ಹೆಣ್ಣು ಮಗುವಿನ ಜನನವಾಗುತ್ತದೆ. ಲಿಂಗಣ್ಣನು

ವಾರಕ್ಕೊಮ್ಮೆ ಬಂದು ಹೋಗುತ್ತಾನೆ ಮಗು ಅಜ್ಜಿಯನ್ನು ಚೆನ್ನಾಗಿ ಹಚ್ಚಿಕೊಳ್ಳುತ್ತದೆ. ರಾತ್ರಿ ಮಲಗಲು ಅಜ್ಜಿಯ ಮಗ್ಗುಲೇ ಬೇಕು. ಲತಾಗೆ ಕೈತುಂಬ ಕೆಲಸವಿದ್ದಿದ್ದರೆ ಶ್ರೀಕಂಠನ ಅಗತ್ಯವಿರುತ್ತಿರಲಿಲ್ಲ, ಲಿಂಗಣ್ಣನೊಂದಿಗೆ ಊರಿಗೆ ಬಂದಾಗ ಮಗು ಹೆಚ್ಚು ಆಟವಾಡುತ್ತದೆ. ಲತಾ ಮತ್ತು ಶ್ರೀಕಂಠ ವಿಷಯ ತನ್ನ ಆಪ್ತೇಷ್ಟರಿಂದ ತಿಳಿದುಕೊಳ್ಳುತ್ತಾನೆ. ಎಂದೋ ಯಾರಿಂದಲೋ ಕೇಳಿದ ಒಂದು ಕತೆ ನೆನಪಿಗೆ ಬರುತ್ತದೆ. ಶ್ರೀಕಂಠ ಲತಾಳ ಕೋಣೆಗೆ ಪ್ರವೇಶ ಪಡೆಯುವುದು. ಅದೇ ಕಾದಿದ್ದು ಲಿಂಗಣ್ಣ ಬಾಗಿಲಿಗೆ ಬೀಗ ಹಾಕಿ ಮಾದಯ್ಯ ತಾಯಿ, ತಂದೆಯರನ್ನು ಬರಮಾಡಿಕೊಂಡು ಮನೆಯಲ್ಲಿ ಸೇರಿಸಿ ಚಿಲಕ ತೆಗೆಯುತ್ತಾನೆ. ಆತನಲ್ಲಿ ಕಪಟವಿಲ್ಲ, ಶಾಂತಿ, ಸಮಾಧಾನಗಳು ಅವನ ಮುಖದಲ್ಲೆದ್ದು ಕಾಣುತ್ತದೆ. ಬೇರೆ ಗಂಡಸ್ಸಾಗಿದ್ದರೆ ಎಷ್ಟು ರಂಪಾಟ ಮಾಡುತ್ತಿದ್ದರೋ ಆದರೆ ಲಿಂಗಣ್ಣನ ವ್ಯಕ್ತಿತ್ವ ದೊಡ್ಡದು. ಹೂಮಾಲೆ ಅವರಿಬ್ಬರ ಕೈಗೆ ಕೊಟ್ಟು ಕುರ್ಚಿಯಲ್ಲಿ ಕೂರಿಸುತ್ತಾನೆ. ಯಾರಿಗೂ ಅಲ್ಲೇನೂ ನಡೆಯುತ್ತಿದೆ ಎಂಬುದು ಗೊತ್ತಾಗುವುದಿಲ್ಲ. "ಪರಸ್ಪರ ಪ್ರೀತಿಯಿಲ್ಲದಿದ್ದರೆ ಸಂಸಾರ ಸುಖಮಯವಾಗದು, ವೈವಾಹಿಕ ಆನಂದ ಫಲಿಸದು, ಸಮಾನ ಮನೋಧರ್ಮ ಮತ್ತು ಶಾರೀರಿಕ ಸಾಮರಸ್ಯದಿಂದ ಮಾತ್ರ ಆನಂದ ಸಾಧ್ಯ, ಕಳ್ಳತನದ ಒಡನಾಟ ಹಿಂಸೆಯಾಗುತ್ತದೆ. ಅಷ್ಟೇ ಅಲ್ಲ ಅದರಿಂದ ಊರ ಶಾಂತಿ ಕೆಡುತ್ತದೆ, ಏಕಕಾಲದಲ್ಲಿ ನಡೆಯುವ ಬಿಡುಗಡೆ ಮತ್ತು ಕೂಡಿಕೆಗಳನ್ನು ಊರಿನ ಪಂಚರು ಹೆಣ್ಣು ಗಂಡುಗಳ ಕಡೆಯವರು ಒಪ್ಪಿಕೊಳ್ಳುವುದು ಶ್ರೇಯಸ್ಕರ, ನಾವೆಲ್ಲರೂ ಈ ನವವಧೂವರರಿಗೆ ಸರ್ವ ಶುಭ ಕೋರೋಣ, ಮಗು ಮಾತ್ರ ನನ್ನ ಸೋದರ ಮಾವಂದಿರ ಮನೆಯಲ್ಲಿ ಹಾಗೂ ನನ್ನ ಬಳಿ ಇರುತ್ತದೆ. ಮಗುವಿಗೆ ಬೇಕಾದ್ದೂ ಅದೆಯೇ. ತಾಯಿ ಯಾವಾಗ ಬೇಕಾದರೂ ಬಂದು ನೋಡಿಕೊಂಡು ಹೋಗಬಹುದು, ಒಂದೆರಡು ದಿನ ತನ್ನ ಬಳಿ ಇಟ್ಟುಕೊಳ್ಳಲುಬಹುದು.'[೧] ಎಂದು ಹೇಳಿ ಪಂಚನಾಮೆಗೆ ಲಿಂಗಣ್ಣನೇ ಲತಾ ಶ್ರೀಕಂಠರಿಂದ ಸಹಿ ಹಾಕಿಸುತ್ತಾನೆ. ಲಿಂಗಣ್ಣನ ಅತ್ತೆ ಮಾವಂದಿರು ಇದನ್ನೆಲ್ಲ ನೋಡಿ ಕಣ್ಣೀರು ಸುರಿಸುತ್ತಾರೆ.

ಲಿಂಗಣ್ಣ ಕೆಲಸಕ್ಕೆ ರಾಜೀನಾಮೆ ನೀಡಿ ಕೃಷಿ ಕೆಲಸದಲ್ಲಿ ಮಗ್ನನಾಗಿ ಸರಳ ಜೀವನ ನಡೆಸುತ್ತಾ, ತಂದೆ ತಾಯಿಯರಿಗೆ ಊರುಗೋಲಾಗುತ್ತಾನೆ. ಸಮಾಜಸೇವೆಯಲ್ಲಿ ತೊಡಗಿಕೊಳ್ಳುತ್ತಾನೆ. ಮಗಳು ಕಣ್ಣಾಗುತ್ತಾಳೆ. ಊರಿಗೆ ಅಷ್ಟೆ ಅಲ್ಲ ಆತ ಸಮಾಜಕ್ಕೆ ಒಂದು ದೊಡ್ಡ ನೀತಿ ಪಾಠವನ್ನು ಬೀದಿ ಬೆಳಕಾಗಿಸುತ್ತಾನೆ.

**"ಸೇಡು"**: ಈ ಕತೆಯಲ್ಲಿ ಅವಸರವಿಲ್ಲದೆ ನಿಧಾನವಾಗಿ ಡಿಗ್ರಿ ಮುಗಿಸಿದ ಕಣ್ಣೇಗೌಡನಿಗೆ ಹೈಸ್ಕೂಲು ಅಧ್ಯಾಪಕ ವೃತ್ತಿ ಬೇರೆ ಗ್ರಂಥಾಲಯ ವಿಜ್ಞಾನದ ಓದಿನ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಮನಃಸಾಕ್ಷಿ, ಪುಟ. ೧೦೩.

ನೆಪದಲ್ಲಿ ಮುಂಬಯಿಯ ಮೋಜು ಬೇಕು. ಅವನ ಉದ್ಧಟತನ, ಭ್ರಷ್ಟಾಚಾರ, ಜೊತೆಗೆ ಅಧ್ಯಕ್ಷ ಉದ್ಧಟ ನೌಕರರು ಶಿಕ್ಷಕರ ಸ್ಥಿತಿಗತಿಗಳನ್ನು ಈ ಕತೆಯಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ. ಶೈಕ್ಷಣಿಕ ಕ್ಷೇತ್ರದ ನೈತಿಕ ಅಧಃಪತನ ಈ ಕತೆಗಾರರನ್ನು ಸಾಕಷ್ಟು ಗಾಢವಾಗಿ ಚಿಂತೆಯುಂಟು ಮಾಡಿದೆ ಎಂಬುದಕ್ಕೆ ಭ್ರಷ್ಟ ಮುಖ್ಯೋಪಾಧ್ಯಾಯ" ಕಥೆ ಸಾಕ್ಷಿಯಾಗಿದೆ. ಕಥೆಯಾರಂಭದಲ್ಲಿ ಇಂತಹ ಅಧೋಗತಿಯ ಸುದೀರ್ಘ ಪಟ್ಟಿಯೇ ಇರುವುದನ್ನು ಕಾಣಬಹುದು. ದೀನದಲಿತರ ಮತ್ತು ಹಳ್ಳಿಯ ಮಕ್ಕಳು ಅವಕಾಶ ವಂಚಿತರಾಗುವುದು, ಪಟ್ಟಣದ ಮಕ್ಕಳೊಡನೆ ಅವರು ಜೊತೆಗೂಡಲು ಸಾಧ್ಯವಾಗದಿರುವುದು, ಆದರ್ಶ ವಿದ್ಯಾಶಾಲೆಯ ಸ್ಥಾಪನೆಗೆ ಆಢಲಿತದ ಅಸಹಕಾರ, ಲಂಚಗುಳಿತನ, ನಾಯಕರ ತೀರ್ಪು, ಅಧಿಕಾರಿಗಳ ಉದ್ಧಟತನವನ್ನು ತುಂಬಾ ಮಾರ್ಮಿಕವಾಗಿ ಚಿತ್ರಿಸುತ್ತಾರೆ. ಈ ಕತೆ ತುಂಬಾ ಪ್ರಭಾವಶಾಲಿಯಾಗಿ ಚಿತ್ರಣವಾಗಿದೆ. ಆದರೂ ಸಣ್ಣಕತೆಯ ವ್ಯಾಪ್ತಿಯನ್ನು ಮೀರಿ ಬೆಳೆದಿದೆ. ಈ ಕತೆಯಲ್ಲಿ ವೇಗದ, ಉದ್ವೇಗದ ಕೆಲವೊಮ್ಮೆ ಭಾವೋದ್ವೇಗದ ಬರವಣಿಗೆ, ಕಥೆಯಲ್ಲಿ ಕಲಾತ್ಮಕತೆ ಮತ್ತು ತಂತ್ರ ಸಂಪೂರ್ಣವಾಗಿಯೇ ಸೋತಿದೆ. ಬಹುಮಟ್ಟಿಗೆ ಈ ಕಥೆಯು ಭ್ರಷ್ಟಚಾರಗಳ, ಅಪಮೌಲ್ಯಗಳ ಸುದೀರ್ಘ ಪಟ್ಟಿಯಿಂದ ತುಂಬಿದೆ.

**"ಹುಟ್ಟು ಸುಳಿ ಸುಟ್ಟರೂ ಹೋಗದು":** ಚೆನ್ನಂಗೆರೆಯ ಚಿಕ್ಕೇಗೌಡನೊಬ್ಬ ಕೆಎಲ್ಎಸ್ ಓದಿ ಕೆಲಸವಿಲ್ಲದೆ ಕೃಷಿ ಮಾಡುತ್ತಾನೆ. ಜೊತೆಗೆ ಬೆಣ್ಣೆ, ಕಡಲೆಕಾಯಿ, ವ್ಯಾಪಾರ ನಡೆಸುತ್ತಿರುತ್ತಾನೆ. ವ್ಯಾಪಾರದ ಜೊತೆಗೆ ಉಪಾಧ್ಯಾಯ ವೃತ್ತಿಗೂ ಹಾತೊರೆಯುತ್ತಾನೆ. ಮುದ್ದನ ಹಾಳು ಎಂಬ ಊರಿನಲ್ಲಿ ಉಪಾಧ್ಯಾಯ ಕೆಲಸ ಸಿಗುತ್ತದೆ. ಕುಗ್ರಾಮವಾದ್ದರಿಂದ ಯಾರು ಕೂಡ ತನ್ನ ಕೆಲಸದ ಬಗ್ಗೆ ತಲೆ ಹಾಕುವುದಿಲ್ಲವೆಂದು ಜೊತೆಗೆ ಏಕೋಪಾಧ್ಯಾಯ ಶಾಲೆಯಾದ್ದರಿಂದ ತಾನು ಸರ್ವಸ್ವತಂತ್ರ; ನಾನೇನು ಮಾಡಿದರೂ ಆದೀತು ಎಂಬ ಧೈರ್ಯವಿರುತ್ತದೆ. ಆ ಊರಿನ ಗೌಡ ಸಿದ್ದೇಗೌಡರನ್ನು ಪರಿಚಯ ಮಾಡಿಕೊಂಡು ಅವನ ಸ್ನೇಹವನ್ನು ಸಂಪಾದಿಸಿಕೊಳ್ಳುತ್ತಾನೆ. ಆ ಶಾಲೆ ನಾಲ್ಕಾರು ತಿಂಗಳಿಂದ ಮೇಷ್ಟರಿಲ್ಲದೆ ಧೂಳಿಡಿದುಕೊಂಡಿರುತ್ತದೆ. ಹುಡುಗರ ಜೊತೆಗೂಡಿ ಸ್ವಚ್ಛಗೊಳಿಸುವಾಗ ಬಸಮ್ಮ ಎಂಬ ಹೆಂಗಸೊಬ್ಬಳು ಸಹಾಯಕ್ಕೆ ಬರುತ್ತಾಳೆ. ಅವಳಿಗೆ ಇಬ್ಬರು ಮಕ್ಕಳು, ಒಬ್ಬ ವಯಸ್ಸಿಗೆ ಬಂದ ಮಗಳು ಮತ್ತು ನಾಲ್ಕನೆ ತರಗತಿಯಲ್ಲಿ ಓದುತ್ತಿರುವ ಮಗ. ಮಗನ ಓದಿನ ಬಗ್ಗೆ ವಿಚಾರಿಸಲಾಗಿ ಬಸಮ್ಮ ಆಗಾಗ್ಗೆ ಶಾಲೆಗೆ ಬರುವುದರಿಂದ ಇಬ್ಬರು ಸರಸ ಸಲ್ಲಾಪ ನಡೆಸುತ್ತಿರುತ್ತಾರೆ. ಗೌಡರಿಲ್ಲದ ಸಮಯ ನೋಡಿ ಅವಳ ಮನೆಯಲ್ಲಿ ತಂಗಿಬರುತ್ತಾನೆ. ಏಕೋಪಾಧ್ಯಾಯ ಶಾಲೆಯ ಸ್ಥಿತಿ ತಿಳಿದು ಬರುತ್ತದೆ. ರಜಾದಿನಗಳಲ್ಲಿ ಊರಿಗೆ ಶಾಲೆಯ ದಾಖಲಾತಿಗಳೊಂದಿಗೆ ಹಾಜರಾಗುವುದು,

ಕೇಳಿದರೆ ದಾಖಲೆಗಳಿದ್ದರೆ ತಾನೇ ಅದು ಇದು ಎಂದು ಪ್ರಶ್ನೆ ಕೇಳುತ್ತಾರೆ, ನಾನಿಲ್ಲದಾಗ ತನಿಖಾಧಿಕಾರಿಗಳು ಹೋದರೆ ತಾನು ರಜೆ ಹಾಕಿರುವುದಾಗಿಯೂ ಅವರಿಗೆ ಮಾಂಸದ ಭೋಜನ ವ್ಯವಸ್ಥೆ ಮಾಡಿಸಿ ಅಧಿಕಾರಿಗಳಿಗೆ ಮೇಷ್ಟ್ರ ಪಂಗನಾಮ ಹಾಕಿ, ಅವರು ಮನುಷ್ಯರಲ್ಲವೇ ಚಟಗಳಿರುವುದೆಂದಾಗ. ಮೇಷ್ಟ್ರ ಕೆಲಸನೇ ಸರಿಯೆಂದು ವಿದ್ಯಾರ್ಥಿಯರೆಲ್ಲ ಎಂದುಕೊಳ್ಳುತ್ತಾರೆ. ಇಂದಿನ ಶೈಕ್ಷಣಿಕ ಸ್ಥಿತಿ ಕಂಡುಬರುತ್ತದೆ.

ಮೈಸೂರಿನ ಚನ್ನಂಗೆರೆಯ ವಿದ್ಯಾರ್ಥಿ ಧರ್ಮಪ್ಪ ಕೋಟೆಗದ್ದುಗೆ ನೋಡುವ ಸಲುವಾಗಿ ಚಿಕ್ಕೆಗೌಡನ ಜೊತೆ ಸೈಕಲ್‌ನಲ್ಲಿ ಮುದ್ದನ ಹಾಳಿಗೆ ಹೋಗುತ್ತಾನೆ. ಊರೆಲ್ಲ ತೋರಿಸಿ ಗೆಳತಿಯ ಮನೆಯಲ್ಲಿ ಊಟದ ಏರ್ಪಾಡು ಮಾಡಿಸುತ್ತಾನೆ. ಅಷ್ಟೊಂದು ಸಲಿಗೆಯಿಂದಿದ್ದನ್ನು ನೋಡಿ ಧರ್ಮಪ್ಪ ಕೇಳಿದಾಗ ಮುದ್ದನಹಾಳಿಯವರು ಸುಗ್ಗಿಗೆಂದು ಬಂದಾಗ ಇವಳ ಪರಿಚಯವಾಯಿತೆಂದು ಅವನ ಅವಳ ಕಾಮಲೀಲೆಯನ್ನು ವರ್ಣಿಸುವುದು, ಧರ್ಮಪ್ಪ ಉಪಾಧ್ಯಾಯನಾಗಿದ್ದು ವಿದ್ಯಾರ್ಥಿಗಳನ್ನು ಸರಿಯಾದ ಮಾರ್ಗದಲ್ಲಿ ನಡೆಸಬೇಕು, ಅದರಿಂದ "ನಿನಗೆ ಶ್ರೇಯಸ್ಸು ದೇಶಕ್ಕೆ ಯಶಸ್ಸು"[೧] ಎಂದು ಹೇಳುತ್ತಾನೆ. ಅವರಿಬ್ಬರ ಮಾತಿನಲ್ಲಿ ಇಂದಿನ ಪರಿಸರ, ವಿದ್ಯಾ ಇಲಾಖೆ, ರಾಜಕಾರಣಿಗಳ ಇಂದಿನ ವ್ಯವಸ್ಥೆ ಬಗ್ಗೆ ತಿಳಿದುಬರುತ್ತದೆ.

ರಂಗರಾಜು ಮೈಸೂರಿನ ಜಿಲ್ಲಾ ಶಿಕ್ಷಣಾಧಿಕಾರಿ ಧರ್ಮಪ್ಪ ಸ್ನೇಹಿತ ಚಿಕ್ಕೇಗೌಡನು ತನಿಖಾಧಿಕಾರಿಗಳು ಮುಂಚಿತವಾಗಿ ಪತ್ರ ಬರೆದು ಬಂದರೂ ಶಾಲೆಯಲ್ಲಿರುವುದಿಲ್ಲವೆಂದು ನಿನ್ನ ಬಗ್ಗೆ ದೂರು ಬಂದಿದೆ ಎಂದಾಗ ಅವರು ಲಂಚ ಕೇಳಿದರೂ ಕೊಡಲಿಲ್ಲ ಎಂದ ನಾನು ನಿಮ್ಮನ್ನ ಅಮಾನತ್ತಿಲ್ಲಿಡುತ್ತೇನೆಂದಾಗ ನನ್ನ ಬಗ್ಗೆ ದೂರು ಕೊಟ್ಟರೆ ನಿಮ್ಮೆಂಡತಿ ವಿಧವೆಯಾಗುತ್ತಾಳೆಂದು ನನಗೆ ಬೆದರಿಕೆಯೊಡ್ಡುತ್ತಾನೆ. ಅವನಿಗೆ ನೀನಾದರೂ ಬುದ್ಧಿಹೇಳು ಎಂದು ಹೇಳುವುದಕ್ಕೆ ಬಂದಿದ್ದೇನೆನ್ನುತ್ತಾನೆ. ಇಲ್ಲ ಇಂದಿನ ಶೈಕ್ಷಣಿಕ ವ್ಯವಸ್ಥೆ ಯಾವ ರೀತಿಯಲ್ಲಿ ದೆಂಬುವುದು ಉನ್ನತ ಅಧಿಕಾರದಲ್ಲಿದ್ದರೂ ಏನು ಮಾಡದ ಪರಿಸ್ಥಿತಿ. ಗುಂಡಾಗಿರಿ ಲಂಚತನ ಇವೇ ನಮ್ಮ ದೇಶದಲ್ಲಿ ತುಂಬಿ ತುಳುಕುತ್ತಿದೆಯಲ್ಲವೇ ಹಣಬಲದಿಂದ ಚಿಕ್ಕೇಗೌಡ ಮೈಸೂರಿನ ಪ್ರಾಥಮಿಕ ಶಾಲೆಗೆ ವರ್ಗಾವಣೆಯಾಗುತ್ತಾನೆ. ತನ್ನ ವ್ಯವಹಾರವನ್ನು ನಡೆಸಿಕೊಂಡು ಜೀವನ ನೀಗಿಸುತ್ತಾನೆ. ವಿದ್ಯಾರ್ಥಿಗಳಿಗೆ ಗುರಿ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಹುಟ್ಟು ಸುಳಿ ಸುಟ್ಟರೂ ಹೋಗದು, ಪುಟ. ೧೧೮.

ತೋರಿಸುವ ಗುರುವೇ ಈ ಮಾರ್ಗವನ್ನಿಡಿದರೆ ನಮ್ಮ ವಿದ್ಯಾರ್ಥಿಗಳ, ದೇಶದ ಭವಿಷ್ಯದ ಗತಿಯೇನು.

**"ಸಂಜೆ ಕಾಲೇಜೇ ಸರಿ"**: ಈ ಕತೆಯು ಮುದ್ದೇಗೌಡ ಹೇಗಾದರೂ ಮಾಡಿ ಹಣ ಸಂಪಾದನೆ ಮಾಡಬೇಕು, ಅದಕ್ಕೆ ಬುದ್ಧಿವಂತಿಕೆ ಇಲ್ಲದಿದ್ದರೂ ಪ್ರಾಧ್ಯಾಪಕರನ್ನು ಹೆದರಿಸಿ, ಬೆದರಿಸಿ ಅಂಕ ಪಡೆದುಕೊಳ್ಳುತ್ತಾನೆ. ಎಂ.ಎ. ದ್ವಿತೀಯ ದರ್ಜೆಯಲ್ಲಿ ಪದವಿ ಪಡೆದುಕೊಳ್ಳುತ್ತಾನೆ. ಅವನ ಆಸೆ ಸಂಜೆ ಕಾಲೇಜಿನಲ್ಲಿ ಉಪನ್ಯಾಸಕ–ನಾಗಿರಬೇಕೆಂದು ಏಕೆಂದರೆ ಹಗಲೆಲ್ಲ ಗದ್ದೆ, ರಾಜಕೀಯ, ವ್ಯವಹಾರಗಳನ್ನು ನಡೆಸಿಕೊಳ್ಳಬಹುದೆಂಬ ಕಾರಣಕ್ಕೆ. ಪ್ರಾಧ್ಯಾಪಕರಿಗೆ ಬೆದರಿಕೆಯನ್ನೊಡ್ಡಿ ಹೋಗುತ್ತಾನೆ. ಆದರೆ ಪ್ರಾಧ್ಯಾಪಕರು ಸರಸ್ವತಿ ಮಂದಿರಲ್ಲಿ ದರೋಡೆಯೇ? ಮೋಸವೇ ಇಂಥವರಿಂದ ಶಿಕ್ಷಣ ಅಧೋಗತಿಗಿಳಿಯುತ್ತದಲ್ಲದೇ ನಮ್ಮ ಮಕ್ಕಳು ಹಾಳಾಗುತ್ತಾರೆಂದು ಯೋಚಿಸುತ್ತಿರುವಾಗ ಹೆಂಡತಿ ರಾಜಕಾರಣಿಗಳಿಗೆ, ಶಾಸಕರಿಗೆ ಇಲ್ಲದ ಉಸಾಬರಿ ನಿಮಗೇತಕ್ಕೆನ್ನುತ್ತಾಳೆ. ಈ ಮಾತುಗಳನ್ನು ನೋಡಿದರೆ ಎಲ್ಲ ಕ್ಷೇತ್ರದವರೂ ನಮಗೇಕೆ ಎಂದು ತಮ್ಮ ತಪ್ಪುಗಳನ್ನು ಇನ್ನೊಬ್ಬರ ತಲೆಗೆ ಗೂಬೆಯನ್ನು ಕೂರಿಸಿ ತಾವು ಮಾತ್ರ ಸಭ್ಯರಂತೆ ನಟಿಸೋದು ಕಂಡು ಬರುತ್ತದೆ. ಹೀಗೆ ಮುದ್ದೇಗೌಡ ಯಾರೋ ಎಷ್ಟೋ ವರ್ಷಗಳ ಹಿಂದೆ ಮಾಡಿಟ್ಟಿದ್ದ ಟಿಪ್ಪಣಿಯ ಪುಸ್ತಕ ತಂದು ವಿದ್ಯಾರ್ಥಿಗಳ ಮುಂದೆ ಓದುವುದು, ತಪ್ಪಾದರೆ ನಿಮ್ಮನ್ನು ಪರೀಕ್ಷಿಸಲು ತಪ್ಪು ಹೇಳಿದೆನೆಂದು, ಒಮ್ಮೊಮ್ಮೆ ತರಗತಿಗೆ ಹಾಜರಾದರೂ ಹಾಜರಾತಿಯಲ್ಲಿ ಸಹಿ ಇರುತ್ತಿತ್ತು. ಮುದ್ದೇಗೌಡನ ಮೇಲೆ ಬರುತ್ತದೆ. ಪಾಠ ಸರಿಯಿಲ್ಲ ಹಗಲೆಲ್ಲಾ ಹೊಲಗೆಲಸ, ತರಗತಿಗೆ ಸರಿಯಾಗಿ ಬರುತ್ತಿಲ್ಲವೆಂದು, ಇದನ್ನು ನೋಡಿ ಕ್ರಾಫರ್ಡ್‌ಹಾಲಿಗೆ ತನ್ನ ಸ್ನೇಹಿತರೊಂದಿಗೆ ಕುಲಪತಿಯವರೊಂದಿಗೆ ತಿರುಗಿ ಬೀಳುತ್ತಾನೆ. ಹದಿನಾಲ್ಕು ಹದಿನೈದು ವರ್ಷವಾದರೂ ಖಾಯಂಗೊಳಿಸಿಲ್ಲ, ಜೀವನಕ್ಕಾಗಿ ಏನು ಮಾಡೋದು ನೀವು ಕೊಡುವ ಸಂಬಳ ಸಾಲುವುದಿಲ್ಲ, ವ್ಯವಸಾಯ ಮಾಡುತ್ತಿದ್ದೇನೆಂದು ಅರಚಾಡಿದಾಗ ಕುಲಪತಿ ನಿಮ್ಮ ಕೆಲಸ ಖಾಯಂಗೊಳಿಸುತ್ತೇನೆಂದು ಹೇಳಿ ಕೆಲಸವು ಖಾಯಂಗೊಳ್ಳುತ್ತದೆ. ಪ್ರಾಚಾರ್ಯರ ಹತ್ತಿರ ಕುಲಪತಿಯ ನಡುವೆ ನಡೆದ ವಿಷಯವನ್ನು ಹೇಳುತ್ತಾನೆ. ಮೇಡಂ ನಿಮಗೆ ಉಪನ್ಯಾಸಕ ಹುದ್ದೆ ಸರಿಯಿಲ್ಲ, ನೀವು ರಾಜಕೀಯ ಕ್ಷೇತ್ರದಲ್ಲಿದ್ದರೇ ಮಂತ್ರಿಯೋ, ಮುಖ್ಯಮಂತ್ರಿಯೋ ಆಗಬಹುದಿತ್ತು. ನಿಮ್ಮ ಪ್ರತಿಭೆಗೆ ಎಲ್ಲ ಬಾಡಿಹೋಗುತ್ತಿದೆ ಎಂದು ಯಾರು ಯಾರು ಯಾವ ಯಾವುದಕ್ಕೆ ಲಾಯಕ್ಕು ಅವರನ್ನು ಅಲ್ಲಿ ಹೊಂದಿಸದಿದ್ದುದರಿಂದ ದೇಶ ಕೆಡುತ್ತಿದೆ ಎಂದು ಹೇಳುತ್ತಾಳೆ. ಮುದ್ದೇಗೌಡ ಮಿತ್ರಮಂಡಳಿಯ ಸದಸ್ಯನಾಗತ್ತಾನೆ. ಅವನ ನಡವಳಿಕೆಯಲ್ಲಿ ಯಾವುದೇ

ಬದಲಾವಣೆಗೊಳ್ಳುವುದಿಲ್ಲ. ಅಧಿಕಾರ ಲಾಲಸೆಯ ಸ್ವಾರ್ಥಲೋಲುಪ, ನೀತಿಗೆಟ್ಟ ಧೂರ್ತ ಸರ್ಕಾರದ ಪರಿಣಾಮ ಶಿಕ್ಷಣಮಟ್ಟದ ಇಳಿಕೆಯಿಂದ ದೇಶ ಸರ್ವಾವನತಿಗೆ ಜಾರುತ್ತಿದೆಂಬುದು ಈ ಕತೆಯಿಂದ ತಿಳಿದುಬರುತ್ತದೆ.

**"ಅಧಿಕಾರ ಲಕ್ಷ್ಮಿಯೂ ಚಂಚಲೆ":** ಈ ಕತೆಯೂ ಅಧಿಕಾರವೆನ್ನುವುದು ಶಾಶ್ವತವಲ್ಲ. ಅಧಿಕಾರ ಬಂದಾಗ ವ್ಯಕ್ತಿಯು ಹೇಗೆ ಬದಲಾವಣೆಗೊಳ್ಳುತ್ತಾನೆಂಬುದು ದೇವಗೆರೆ ಪ್ರಾಂತ್ಯದ ಅವ್ವೇರಹಳ್ಳಿ, ಮಾರನಹಳ್ಳಿ ಮನೆತನಗಳ ನಡುವೆ ಸ್ಪರ್ಧೆ ಇದ್ದದ್ದೆ. ಆ ಮನೆತನಗಳಿಗೆ ಸೇರಿದ ಚಿನ್ನರಾಮಯ್ಯ ಮತ್ತು ರಂಗಪ್ಪನವರ ನಡುವೆ ಸ್ವಾತಂತ್ರ್ಯಾನಂತರ ಚುನಾವಣೆಗಳಲ್ಲಿ ಈ ಎರಡು ಮನೆತನಗಳ ನಡುವೆ ಹೋರಾಟ ಪ್ರಾರಂಭವಾಗುತ್ತದೆ.

ಚಿನ್ನರಾಮಯ್ಯ ಹೆಚ್ಚು ಓದಿದವನಲ್ಲ ಬೇಜವಾಬ್ದಾರಿ ಯುವಕ ತಂದೆಗೆ ಅವನನ್ನು ತಹಶಿಲ್ದಾರನನ್ನಾಗಿ ಮಾಡಬೇಕೆಂಬ ಆಸೆ, ಹುಡುಗಾಟಿಕೆ ಸ್ವಭಾವ, ಕಳ್ಳತನ ಮಾಡಿ ಸಿಕ್ಕಿಬಿದ್ದರೆ ಅಪ್ಪನ ಹೆಸರೇಳಿ ತಪ್ಪಿಸಿಕೊಳ್ಳುತ್ತಿದ್ದ. ಮದುವೆ ಮಾಡಿದರೆ ಸರಿಹೋಗಬಹುದೆಂದು ಮದುವೆಮಾಡುತ್ತಾರೆ. ಚಿನ್ನರಾಮಯ್ಯನಿಗೆ ಹೆಂಡತಿ ಸಾಕುವ ಜವಾಬ್ದಾರಿ ಬರುವುದಿಲ್ಲ. ಮನೆಗೆ ಸರಿಯಾಗಿ ಬರುತ್ತಿರಲಿಲ್ಲ. ಇದೇ ಸಮಯದಲ್ಲಿ ಒಂದು ಹೆಣ್ಣು ಮಗುವಾಗುತ್ತದೆ. ರಾಜಕೀಯದ ಕಡೆಗೆ ತಿರುಗುತ್ತಾನೆ. ಮಾರನಹಳ್ಳಿ ಗೌಡನಿಗೆ ಸರಿಸಮವಾಗಿ ತನ್ನ ಮಗ ಬೆಳೆಯುತ್ತಿದ್ದಾನೆಂದು ಅಪ್ಪ ಹಣದ ನೆರವು ನೀಡುತ್ತಾನೆ.

ಮಾರನಹಳ್ಳಿಯ ರಂಗಪ್ಪ ಆಗರ್ಭ ಶ್ರೀಮಂತ ಎಸ್ಸೆಸ್ಸೆಲ್ಸಿ ಓದಿರುತ್ತಾನೆ. ರಾಜಕೀಯ ಶ್ರೀಮಂತರ ಅಗತ್ಯವಿರುವುದರಿಂದ ರಂಗಪ್ಪ ಕಾಂಗ್ರೆಸ್ ಪಕ್ಷದಲ್ಲಿ ಅಧಿಕಾರ ಗದ್ದುಗೆಗೇರುತ್ತಾನೆ. ಜೊತೆಗೆ ಜಿಪುಣ. 'ಬಡವರ ಮಕ್ಕಳು ಓದಿ ವಿದ್ಯಾವಂತರಾದರೆ, ಶ್ರೀಮಂತರ ಗೌಡ ಪಟೇಲರ ಹೊಲಗದ್ದೆಗಳಲ್ಲಿ ಕೆಲಸ ಮಾಡುವವರು ಸಿಗುವುದಿಲ್ಲ. ಅವರೇ ಮುಂದೆ ತಮಗೆ ಇದಿರಾಗಬಹುದು. ತಮ್ಮಂಥವರೊಡನೆ ಅಧಿಕಾರ ಹಂಚಿಕೊಳ್ಳಲು ಹೆಣಗಾಡಬಹುದು; ಕೆಲಸ ಮಾಡುವವರಿಲ್ಲದಿದ್ದರೆ ಆರ್ಥಿಕ ಸಂಪತ್ತು ವೃದ್ಧಿಯಾಗುವುದಿಲ್ಲ; ಆಗ ದೇಶ ಬಡತನದಿಂದ ಹಿಂದುಳಿಯಬೇಕಾಗುತ್ತದೆ; ಆದ್ದರಿಂದ ಬಡವರು ವಿದ್ಯೆ ಕಲಿಯಬಾರದೆಂಬುದು ಅವರ ವಾದ"[೧] ಇದನ್ನೇ ಮುಂದಿಟ್ಟುಕೊಂಡು ಮತವನ್ನು ಗಳಿಸಿ ಚುನಾವಣೆಯಲ್ಲಿ ಗೆಲ್ಲುತ್ತಾನೆ.

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಅಧಿಕಾರ ಲಕ್ಷ್ಮಿಯೂ ಚಂಚಲೆ, ಪುಟ. ೧೩೦.

ಶಾಸನ ಸಭೆಯ ಚುನಾವಣೆಯ ಸಂದರ್ಭದಲ್ಲಿ ಪೂರ್ಣ ಬದಲಾವಣೆ-ಗೊಳ್ಳುತ್ತಾರೆ. ಚುನಾವಣೆಯಲ್ಲಿ ಗೆಲ್ಲುವ ಸಲುವಾಗಿ ದಂಪತಿಗಳೆ ಎಲ್ಲ ದೇವರ ಮೊರೆಹೋಗುತ್ತಾರೆ. ಇದನ್ನ ನೋಡಿದರೆ ನಮ್ಮ ದೇಶದ ಮಂತ್ರಿ ಮಹೋದಯರ ನೆನಪು ಕಣ್ಣಿಗೆ ಕಟ್ಟುತ್ತದೆ.

ಈ ಕಡೆ ಚಿನ್ನರಾಮಯ್ಯನ ಪರವಾಗಿ ವಿದ್ಯಾವಂತರು, ಕಂತ್ರಟುದಾರರು, ಸಿನಿಮಾತಾರೆಯರನ್ನು ಕರೆತಂದು ಪ್ರಚಾರ ಗಿಟ್ಟಿಸಿಕೊಂಡು ಚುನಾವಣೆಯಲ್ಲಿ ಗೆದ್ದು ಬರುತ್ತಾನೆ. ಊರಿನ ಜನರು ಉಪಕಾರ ಬಯಸಿ ಬಂದಾಗ ರಾಜ್ಯದ ನಾಯಕನೆಂದು ಹೇಳಿ ತಿರಸ್ಕರಿಸುತ್ತಾನೆ. ಇವನಿಗೆ ವೋಟು ಕೊಡಬಾರದೆಂದು ಶಾಪಹಾಕಿಕೊಳ್ಳುತ್ತಾರೆ.

ವಿರೋಧಪಕ್ಷದ ನಾಯಕನಾಗಿ ಚಿನ್ನರಾಮಯ್ಯ ಮೆರೆಯುತ್ತಾನೆ. ತನ್ನೆಲ್ಲ ಏಳ್ಗೆಗೆ ಕಾರಣರಾದವರನ್ನು, ತವರಯ್ಯನೂ ನೆನಪಿಗೆ ಬರುವುದಿಲ್ಲ. ವಿಷಯಸುಖವನ್ನನುಭವಿಸುತ್ತಾ ರಂಗಪ್ಪನ ಏಳ್ಗೆ ಕಂಡು ಕರುಬುತ್ತಾನೆ, ಆ ಕರುಬೇ ಅವನನ್ನು ಕೆಡಿಸುತ್ತದೆ.

"ಶಾಸಕನ ಪ್ರಜಾದ್ರೋಹವೇ ಆತ್ಮದ್ರೋಹವೆಂಬುದು ಅವನ ಮನಸ್ಸಿಗೆ ಬರುವುದಿಲ್ಲ." ಈಗಿನ ರಾಜಕಾರಣಿಗಳಲ್ಲಿಯೂ ಈ ವಾಕ್ಯ ಕಂಡುಬರುತ್ತದೆ.

**೧೬. ಭ್ರಷ್ಟ ಮುಖ್ಯೋಪಾಧ್ಯಾಯರು":** ಈ ಕತೆಯು ಭ್ರಷ್ಟ ಮುಖ್ಯೋಪಾಧ್ಯಾಯರನ್ನು ಕುರಿತ ಕಥೆಯಾಗಿದೆ. ತಾನು ಮಾಡಿದ ತಪ್ಪಿಗೆ ದಂಡ ತರಲೇಬೇಕು. ಗುರುಪುತ್ರ ಎಂಬುವವರು ಶಿಕ್ಷಣ ಕ್ಷೇತ್ರದಿಂದ ನಿವೃತ್ತಿಯಾದ ನಂತರ ದೀನದಲಿತರಿಗೆ ಗ್ರಾಮೀಣ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಬೇಕೆಂಬ ದೃಷ್ಟಿಯಿಂದ ದೇವಗೆರೆಯಲ್ಲಿ ಪ್ರೌಢಶಾಲೆಯನ್ನಾರಂಭಿಸುತ್ತಾರೆ. ಹೇಗೋ ವಿಷಯ ತಿಳಿದು ಹುದ್ದೆಯ ನಿರೀಕ್ಷೆಯಲ್ಲಿದ್ದವರೂ ಒಂದೊಂದು ಕಾರಣ ಹೇಳಿಕೊಂಡು ಕೆಲಸಕ್ಕಾಗಿ ಗುರುಪುತ್ರರಲ್ಲಿಗೆ ಬರುತ್ತಾರೆ. ಆಗೆ ಬಂದವರಲ್ಲಿ ಬೇರೆ ಶಾಲೆಯಲ್ಲಿ ವಿಜ್ಞಾನ ವಿಷಯ ಬೋಧಿಸುತ್ತಿದ್ದ ಗಂಗಯ್ಯ ಒಬ್ಬ. ಆತನನ್ನೇ ಹಿರಿಯ ಉಪಾಧ್ಯಾಯನನ್ನಾಗಿ ಆಯ್ಕೆ ಮಾಡುತ್ತಾರೆ. ಬಿಡುವಿನ ವೇಳೆಯಲ್ಲಿ ಆಢಳಿತ ಮಂಡಳಿಯ ಕೆಲಸಕ್ಕೂ ಉಪಯೋಗಿಸಿಕೊಳ್ಳುತ್ತಾನೆ. ಗಂಗಯ್ಯ ಅಷ್ಟು ಬುದ್ಧಿಶಕ್ತಿಯಲ್ಲಿ ಚುರುಕೇನಿರಲಿಲ್ಲ. ಅವನಿಗೆ ಕೆಲಸ ಕಲಿಸುವ ಉದ್ದೇಶದಿಂದ ಎಲ್ಲಿಗೆ ಹೋದರೂ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿರುತ್ತಾನೆ. ಹಬ್ಬಹರಿದಿನಗಳಲ್ಲೂ ಗಂಗಯ್ಯ ಗುರುಪುತ್ರರ ಮನೆಗೆ ಹೋಗಿಬರುವಷ್ಟು ಅವರಿಬ್ಬರ ನಡುವೆ ಸಲುಗೆ ಏರ್ಪಡುತ್ತದೆ. ಗುರುಪುತ್ರನ ಸಂಪರ್ಕವನ್ನು ತನ್ನ ವೈಯಕ್ತಿಕ ಪ್ರತಿಷ್ಠೆಗೆ ಬಳಸಿಕೊಳ್ಳಲು ಯತ್ನಿಸುತ್ತಾನೆ. ಹೆಂಡತಿಯನ್ನು

ತೃಪ್ತಿಪಡಿಸಲಿಕ್ಕೆ ಎಂತಹ ಹೀನ ಕಾರ್ಯಕ್ಕೂ ಇಳಿಯಲು ಸಿದ್ಧ. ವಂತಿಗೆಯ ಲೆಕ್ಕ ಕೇಳಿದರೆ ಅದರ ಪೂರ್ಣ ಮುಖ್ಯೋಪಾಧ್ಯಾಯರೆಂದು ನೀವು ತಲೆಕೆಡಿಸಿಕೊಳ್ಳಬೇಡಿ ಎನ್ನುತ್ತಾನೆ. ಗಂಗಯ್ಯ ಗುರುಪುತ್ರನ ಕಡೆಯವನೆಂದು ಉಪಾಧ್ಯಾಯರನ್ನು ಭಯದಲ್ಲಿಟ್ಟುಕೊಳ್ಳುತ್ತಾನೆ. ಮುಖ್ಯೋಪಾಧ್ಯಾಯರಿಗೆ ಸರ್ವಾಧಿಕಾರವನ್ನು ವಹಿಸುತ್ತಾರೆ. ತಾನೇ ಸಂಸ್ಥೆಯನ್ನು ಕಟ್ಟುತ್ತಿರುವುದಾಗಿ ತಿಳಿಸುತ್ತಾನೆ. ಜವಾನನೊಡಗೂಡಿ ವ್ಯವಹಾರಗಳನ್ನು ನಡೆಸುತ್ತಿರುತ್ತಾನೆ. ಆ ಶಾಲೆಯಲ್ಲಿ ಮುಖ್ಯೋಪಾಧ್ಯಾಯ, ಜವಾನ ಗಂಗಯ್ಯವರಷ್ಟೇ ಅಲ್ಲದೆ ಸಿಬ್ಬಂದಿವರ್ಗದವರೆಲ್ಲರೂ ಒಂದೊಂದು ರೀತಿ. ಜವನೇಗೌಡ ಉಪಾಧ್ಯಾಯ ಚಾಡಿಕೋರ, ಕ್ರೀಡಾಪಟು ದುರಹಂಕಾರಿ, ಚಿತ್ರಕಲಾ ಬೋಧಕ ವ್ಯವಹಾರ ಶೂನ್ಯ, ಆದರೆ ರಸಿಕ, ಇಂತಹವರೇ ತುಂಬಿಕೊಂಡಿರುವಾಗ ಉನ್ನತ ನೈತಿಕ ಶಿಕ್ಷಣವನ್ನು ನೀಡುವುದಾದರೂ ಹೇಗೆ? ವಿಷಯವು ಪೋಷಕರಿಗೆ, ನಗರದ ಮುಖಂಡರಿಗೆ ವಿಷಯ ಗೊತ್ತಾಗಿ ಮೇಷ್ಟ್ರುಗಳು ಸಹ ಘನತೆ ಗಾಂಭೀರ್ಯ ಮರ್ಯಾದೆ ಬಿಟ್ಟು ಕಾದಾಡುತ್ತಿರುವಾಗ ನಮ್ಮ ಮಕ್ಕಳ ಭವಿಷ್ಯ ಗತಿ ಏನೆಂದು ಇದಕ್ಕೆಲ್ಲ ಮುಖ್ಯೋಪಾಧ್ಯಾಯರೆ ಕಾರಣವೆನ್ನುತ್ತಾರೆ. ಶಾಲೆಯ ಮುಂದೆ ಧರಣಿ ಇಲ್ಲವೇ ಮಕ್ಕಳನ್ನು ಶಾಲೆಯಿಂದ ವರ್ಗಾವಣೆ ಮಾಡಿಸುವುದಾಗಿ ಮುಖ್ಯೋಪಾಧ್ಯಾಯರು ಕಂಡಾಬಟ್ಟೆ ಮಕ್ಕಳಿಂದ ವಂತಿಗೆ ವಸೂಲಿ ಮಾಡುತ್ತಾರೆಂದು ಹೇಳುತ್ತಾರೆ. ವಿಚಾರಿಸಲಾಗಿ ಆಧಾರವಿಲ್ಲವೆಂದು ಹೇಳುತ್ತಾರೆ. ಒಮ್ಮೆ ವಾಗೀಶನೆಂಬುವವರಿಗೆ ಗಂಗಯ್ಯ ಗುರುಪುತ್ರರೇ ನಿಮ್ಮ ಬಳಿ ಕಳಿಸಿದ್ದಾರೆ ನನ್ನಳಿಯನಿಗೆ ಪ್ರೊಬೆಷನರಿ ಹುದ್ದೆ ಬೇಕು. ಲೋಕಸೇವಾ ಆಯೋಗದ ಸದಸ್ಯರು ಪರಿಚಯವಿದೆಯೆಂದು ಎರಡು ಲಕ್ಷವಾದರೂ ಕೊಡುತ್ತೇನೆಂದು ತನಗೆ ಸಹಾಯ ಮಾಡಿ ಎಂದು ಬೇಡಿಕೊಂಡ ಎಂದು ಹೇಳುತ್ತಾರೆ. ಈ ವಿಷಯವಾಗಿ ಗಂಗಯ್ಯನ ಮೇಲೆ ಸಂಶಯ ಹೆಚ್ಚಾಗಿ ಕಣ್ಣಿಟ್ಟಿನ ಶಾಲೆಗೆ ವರ್ಗಾಯಿಸಿ ಲೆಕ್ಕ ತಪಾಸಣೆ ನಡೆಸಿದಾಗ ಲೆಕ್ಕ ಸರಿಯಾಗಿರಲಿಲ್ಲ. ವಂತಿಗೆಗೆ ರಶೀತಿ ಕೊಡುತ್ತಿರಲಿಲ್ಲವೆಂದು ತಿಳಿದು ಬರುತ್ತದೆ. ಗುರುಪುತ್ರರು ಗಂಗಯ್ಯ ಕೂಡಲೇ ಹಣ ಪಾವತಿಸಬೇಕು ಇಲ್ಲ ಪೊಲೀಸಿ–ಗೊಪ್ಪಿಸುವುದೆಂದು, ಆದರೆ ಅವನ ಸಂಸಾರದ ಗತಿಯೇನೆಂದು ಇಲ್ಲಿ ಗುರುಪುತ್ರನ ಒಳ್ಳೆಯತನ ಎನ್ನಬಹುದು, ಆದರೆ ಗಂಗಯ್ಯ ರಾಜಕಾರಣಿಗಳ ಶಿಕ್ಷಣ ಪದಾಧಿಕಾರಿಗಳನ್ನು ತನ್ನ ಕೈಯಲ್ಲಿಟ್ಟುಕೊಂಡಿರುತ್ತಾನೆಂದು ಸರಿಯಾದ ಲೆಕ್ಕ ನೀಡಬೇಕು ಒಂದು ವರ್ಷದ ಕಾಲಾವಕಾಶ ನೀಡುತ್ತಾನೆ. ವರ್ಗಾವಣೆಗೊಂಡ ಶಾಲೆಯಲ್ಲೂ ಐವತ್ತು ಸಾವಿರ ಗುಳುಂಮಾಡುತ್ತಾನೆ. ಕೇಳಿದಾಗ ಮಾನ್ಯತೆ ಸೌಲಭ್ಯಕ್ಕಾಗಿ ಅಧಿಕಾರಿಗಳಿಗೆ ಲಂಚಕೊಡಬೇಕೆಂದು ಹೇಳುತ್ತಾನೆ. ಪೊಲೀಸರಿಗೆ ನಿನ್ನನ್ನೊಪ್ಪಿಸುತ್ತೇನೆಂದಾಗ ದುಡ್ಡನ್ನು ತಂದೊಪ್ಪಿಸುತ್ತಾನೆ. ಬೆಂಗಳೂರಿನ

ಬ್ಯಾಂಕೊಂದರಲ್ಲಿ ಟ್ರಸ್ಟ್‌ನ ಕಾರ್ಯದರ್ಶಿಯ ಫೋರ್ಜು ಸಹಿ ಮಾಡಿ ಸಾಲ ಪಡೆಯುತ್ತಾನೆ. ಈ ಎಲ್ಲಾ ವಿಷಯವನ್ನು ಚಿಂತಿಸುತ್ತಿರುವಾಗ ಗುರುಪುತ್ರರಿಗೆ ಲಕ್ವ ಹೊಡೆದು ಆಸ್ಪತ್ರೆ ಸೇರುತ್ತಾನೆ. ಇಲ್ಲಿ ಗಂಗಯ್ಯ ಅಷ್ಟೆಲ್ಲ ಮೋಸ ಸುಲಿಗೆ ಮಾಡಿದವನು ಯಾವುದಕ್ಕೂ ತಲೆಕೆಡಿಸಿಕೊಳ್ಳುವುದಿಲ್ಲ. ಆದರೆ ಗುರುಪುತ್ರ ಪ್ರಾಮಾಣಿಕ, ದಯಾವಂತ ಇಂತಹವನಿಗೆ ಎಂತಹ ಶಿಕ್ಷೆಯಲ್ಲವೇ?

ಗಂಗಯ್ಯನ ಇಂಥ ಕಿತಾಪತಿಗೆ ಕರಿರಾಮೇಗೌಡ ಮತ್ತು ಆಡಳಿತ ಮಂಡಳಿಯ ಕಪಟ ಸದಸ್ಯನೊಬ್ಬನು ಕಾರಣ. ಕರಿರಾಮೇಗೌಡ ಗುರುಪುತ್ರನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಗಂಗಯ್ಯನನ್ನು ಸೂತ್ರಧಾರಿಯನ್ನಾಗಿ ಮಾಡಿಕೊಳ್ಳುತ್ತಾನೆ.

ಗಂಗಯ್ಯನ ಸಾಲದ ಬಾಧೆ ಅಧಿಕವಾಗಿ ಬಡ್ಡಿ ಕಟ್ಟಲಿಕ್ಕೆ ಸಂಬಳ ಸಾಲದು. ಗಂಗಯ್ಯನು ಮಿತಿಯಿಲ್ಲದೆ ನಿದ್ರೆಮಾತ್ರೆ ಸೇವಿಸುತ್ತಿದ್ದಾನೆಂಬ ವಿಷಯ ಗುರುಪುತ್ರನಿಗೆ ತಿಳಿದಾಗ "ನಾನೇಕೆ ಈ ವಿದ್ಯಾಸಂಸ್ಥೆಯನ್ನು ಹುಟ್ಟುಹಾಕಿದೆನೋ ನಿವೃತ್ತನಾದ ಮೇಲೆ ಅಜ್ಞಾತವಾಸ ವ್ರತವನ್ನು ಕೈಗೊಂಡಿದ್ದರೆ ಸುಖವಾಗಿರಬಹುದಿತ್ತಲ್ಲವೇ? ಈಗ ಸದಾ ಚಿಂತೆ, ಆಘಾತ, 'ಬ್ರಹ್ಮ ಬಂದರೂ ಶಿಕ್ಷಣ ಇಲಾಖೆಯನ್ನು ಸರಿಪಡಿಸಲಾಗದು. ಈ ಇಲಾಖೆ ಸರಿಹೋಗದಿದ್ದರೆ ದೇಶ ಸಮರ್ಥವಾಗುವು ದೆಂತು? ಸುಭದ್ರವಾಗುವುದೆಂತು? ತಾಯಿ ಭಾರತಿಯೇ ನಿನಗಾದರೂ ಮರುಕಬೇಡವೇ? ಕಾಳಿಯಾಗಿ ಭ್ರಷ್ಟಚಾರಿಗಳನ್ನು ಕರ್ತವ್ಯ ವಿಮುಖರನ್ನು, ನೀತಿಬಾಹಿರರನ್ನು ಕೃತಘ್ನರನ್ನು ನಿವಾರಿಸಲಾರೆಯಾ?"[೧] ಎಂದು ಹಲುಬುತ್ತಾನೆ.

**"ಗೌಡಿಕೆ"**: ಈ ಕತೆಯು ಇತರರ ಭಾಷೆಗಳ ಸಣ್ಣಕತೆಗಳಲ್ಲಿ ಪ್ರಾತಿನಿಧಿಕ ಎಂದು ಹೆಸರಿಸಬಹುದಾದ ಕಥೆ ಮಹತ್ವ ಪೂರ್ಣವಾಗಿ ಮೂಡಿ ಬಂದಿದೆ. ರಾಜೇಗೌಡ ಚನ್ನಂಗೆರೆಯ ಪಟೇಲರೂ, ನಾಡಗೌಡರು, ಶ್ರೀಮಂತರೂ, ರಸಿಕಪ್ರಿಯನಾಗಿದ್ದನು. ತಿಂಡಿಮುಗಿದನಂತರ ಕುಡಿನೀರು ಕಟ್ಟೆಗೆ ಹೋಗುತ್ತಿದ್ದರು. ಅಲ್ಲಿಗೆ ಹೆಣ್ಣುಮಕ್ಕಳು ನೀರು ತರಲುಹೋದಾಗ ಬಿಂದಿಗೆಯನ್ನು ತಲೆಯ ಮೇಲೆ ಕಂಕುಳಲ್ಲಿ ಇರುಕಿಕೊಳ್ಳುವಾಗ ಅವರ ಎದೆಬಾಹುಮುಟ್ಟುಗಳನ್ನು ನೋಡಿ ಆನಂದಿಸುತ್ತಿದ್ದರು. ಮನೆಗೊಂದಾಳುವಿನಂತೆ ಗದ್ದೆ ಕೆಲಸಕ್ಕೆ ಬರಬೇಕಿತ್ತು. ಗಂಡನ ಪ್ರಣಯ ಸಾಹಸ ಕತೆಗಳು ಮಡದಿ ಚೌಡಮ್ಮನಿಗೆ ಗೊತ್ತಿತ್ತು. ಅವಳಿಗೂ ಗಂಡನೊಡನೆ ಸಂಸಾರ ಮಾಡಬೇಕು. ಅವನ ಇಷ್ಟಾರ್ಥಗಳನ್ನು ಪೂರೈಸ ಬೇಕೆಂದು ಅವಳ ಆಸೆ. ನಾನು

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಭ್ರಷ್ಟ ಮುಖ್ಯೋಪಾಧ್ಯಾಯ, ಪುಟ. ೧೪೬.

ಉಪ್ಪು, ಕಾರ, ಹುಳಿ ತಿಂದ ದೇಹ. ಅವರಂತೆ ಆಸೆ, ಆಮಿಷಗಳಿಲ್ಲವೇ? ನನ್ನ ಸಂಕಟವನ್ನು ತೋಡಿಕೊಳ್ಳಲು ನನ್ನವರ್‍ಯಾರಿದ್ದಾರೆ ಎಂದು ಗಂಡನನ್ನು ಲೆಕ್ಕಿಸದೆ ತನ್ನ ದೇಹದ ಅಗತ್ಯಗಳನ್ನು ಪೂರೈಸಿಕೊಳ್ಳಬೇಕೆಂದು ತೀರ್ಮಾನಿಸಿ ಗೌಡರನ್ನು ಕೇಳಿಕೊಂಡು ಬರುವವರಲ್ಲಿ ಪುಂಡಪೋಕರಿಗಳು ಇದ್ದರು. ಅವರನ್ನು ನಯವಿನಯಗಳಿಂದ ಅನುನಯದಿಂದ ಮಜ್ಜಿಗೆ ಕೊಟ್ಟು ಸಲುಗೆಯಿಂದ ಮಾತಿಗಿಳಿಯುತ್ತಿದ್ದಳು. ಹಿತ್ತಲಿನಲ್ಲಿ ತರಕಾರಿ ಬೆಳೆಯುವುದಾಗಿ ತಾನಿರುವ ಸಮಯವನ್ನು ತಿಳಿಸಿ ಅಲ್ಲಿಗೆ ಬರಹೇಳುತ್ತಾಳೆ. ಅಣ್ಣತಮ್ಮಂದಿರಾದ ರಸಿಕ ರಾಚಾಚಾರಿ, ಹೊಲೆಯರ ತಿಮ್ಮ ಹಿತ್ತಲಿನ ತರಕಾರಿ ಬೆಳೆಸುವ ಕೆಲಸ ಮಾಡುವ ನೆವದಿಂದ ಬಂದು ಹೋಗುವ ವಿಷಯ ಗೌಡರಿಗೆ ತಿಳಿಯುತ್ತದೆ. ಚೌಡಮ್ಮನ ಕಾಮ ಕತೆಗೆ ರೆಕ್ಕೆ ಪುಕ್ಕಗಳು ಬೆಳೆಯುತ್ತವೆ. ಗೌಡರ ಭಯದಿಂದ ಜನರು ಯಾರೂ ಮಾತನಾಡುವುದಿಲ್ಲ.



ಗೌಡರಿಗೆ ನಾಡಗೌಡಿಕೆಯಿಂದಾಗಿ ಸುತ್ತಮುತ್ತಲಿನ ಊರುಗಳ ಜನರಿಂದ ಭಯಮಿಶ್ರಿತವಾಗಿ ಗೌರವ ಸೆಳೆದುಕೊಳ್ಳುತ್ತಾರೆ. ಊರಿನ ಪಂಚಾಯ್ತಿಗಳಲ್ಲಿ ತೀರ್ಮಾನವಾಗದ ಸಮಸ್ಯೆಗಳು ಕಟ್ಟೆಮನೆಗೆ ಬರುತ್ತವೆ. ಕಟ್ಟೆಮನೆಯ ತೀರ್ಮಾನ ಅಂತಿಮವಾಗಿರುತ್ತದೆ. ದಂಡಹಾಕುವುದು, ಬಹಿಷ್ಕಾರ ಹಾಕುವುದು, ವಸೂಲಿಯಾದ ದಂಡದಲ್ಲಿ ಸಿಂಹಪಾಲು ಗೌಡರಿಗೂ, ಉಳಿದ ಅರ್ಧದಲ್ಲಿ ಪಂಚಾಯಿತಿದಾರರಿಗೆ ಇನ್ನರ್ಧ ಊರೊಟ್ಟಿನ ನಿಧಿಗೆ ಸೇರುತ್ತಿತ್ತು. ಗಂಡಹೆಂಡಿರ, ತಂದೆಮಕ್ಕಳ ನಡುವೆ, ಅಣ್ಣತಮ್ಮಂದಿರ ನಡುವೆ ಕಲಹ ತಂದು ಹಾಕುವ ದುರ್ವಿದ್ಯೆಯಲ್ಲಿ ಪರಿಣಿತರು. ಮನೆ ಹೊಲಗೆಲಸಕ್ಕೆ ಕರೆದಾಗ ಬರದಿದ್ದವರಿಗೆ ಏನಾದರೂ ನೆಪವೊಡ್ಡಿ ಪಂಚಾಯಿತಿಯ ಮೂಲಕ ಕಿರುಕುಳ ಕೊಡುವುದು ಜೀತದಾಳುಗಳು ಹಗಲು ರಾತ್ರಿ ದುಡಿಯದಿದ್ದರೆ ಏನಾದರೂ ಕದ್ದುಕೊಂಡರೆ ಅವರು ಪತ್ತೆಯಿಲ್ಲವಾಗುತ್ತಾರೆ. ಇಲ್ಲಿ ಅಧಿಕಾರ ಕೈಯಲ್ಲಿರುವುದರಿಂದ ಬಡ ಜೀವಗಳನ್ನು ತನಗೇ ಹೇಗೆ ಬೇಕೋ ಹಾಗೆ ದುಡಿಸಿಕೊಳ್ಳುವ ಜನ ಗೌಡರೇ ಇರಬೇಕು. ಇದಕ್ಕೆ ಮತ್ತೊಂದು ಉದಾಹರಣೆ: ತಿಮ್ಮವ್ವಳೊಬ್ಬ ವಿಧವೆ. ವಯಸ್ಸಿಗೆ ಬಂದ ಮಗನನ್ನು ಕಳೆದುಕೊಂಡಿರುತ್ತಾಳೆ. ದಾಯಾದಿಗಳು ಮನೆಯನ್ನು ತಮಗೆ ಕೊಡುವಂತೆ ಪೀಡಿಸಿದಾಗ ತಿಮ್ಮವ್ವ ಗೌಡನಿಗೆ ಹೇಳುತ್ತಾಳೆ. ಅವನು ಎರಡು ವರ್ಷದವರೆಗೆ ನನ್ನೆಸರಿಗೆ ಬರೆದುಕೊಡು ನಂತರ ತಿರುಗಿಸುತ್ತೇನೆ ಅವರು ನಿನ್ನ ಆಸ್ತಿ ಕೊಡು ಎಂದು ಬಲವಂತ ಮಾಡುವುದಿಲ್ಲವೆಂದು ನಂಬಿಸಿ ಬರೆಸಿಕೊಳ್ಳುವುದು, ಕೊನೆಗೆ ಅವರದಾಗುತ್ತದೆ. ಅವಳು ನೇಣು ಹಾಕಿಕೊಂಡು ಸಾವನ್ನಪ್ಪುತ್ತಾಳೆ.

ಆಂಗ್ಲರ ಶಿಕ್ಷಣನೀತಿಯಿಂದಾಗಿ ಹರಿಜನರಿಗೂ ಶಿಕ್ಷಣ ಮುಕ್ತವಾಗಬೇಕೆಂದು ಹರಿಜನರೊಂದಿಗೆ ಸವರ್ಣೀಯ ಹುಡುಗರು ಓದಲಿಷ್ಟವಿಲ್ಲ. ಜನ ರೊಚ್ಚಿಗೊಳ್ಳುತ್ತಾರೆಂದು ಮುಂದಿಟ್ಟುಕೊಂಡು ಶಾಲೆಗೆ ಹರಿಜನರು ಬಂದರೆ ಹೊಡೆದೋಡಿಸುವಂತೆ ಸವರ್ಣೀಯ ಮಕ್ಕಳನ್ನು ಪುಸಲಾಯಿಸಿದರು. ಅವರ ಪ್ರಯತ್ನ ವಿಫಲಾಗಿ ಯುವಕರು ಓದಿ ವಿದ್ಯಾವಂತರಾಗಿ ನೌಕರಿಗೆ ಸೇರಿ ಜೀವನ ನಡೆಸುತ್ತಿದ್ದುದು. ಸ್ವಾತಂತ್ರ್ಯ ಸಮರದ ಪರಿಣಾಮವಾಗಿ ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಬದಲಾವಣೆಯಾಗಿ, ಹಿಂದಿನಂತೆ ನಾಡಗೌಡಿಕೆಗೆ ಪುರಸ್ಕಾರವಿಲ್ಲದ್ದು. ಜನರ ನಿಂದೆಗೆ ಗುರಿಯಾಗಿ ಚಿಂತೆಕ್ಕೊಳಕ್ಕಾಗಿ ಹಲವಾರು ರೋಗಕ್ಕೆ ತುತ್ತಾಗಿ ತನ್ನ ಪಾಪಕರ್ಮಗಳನ್ನು ನೆನೆಸಿಕೊಂಡು ಹೆಂಡತಿಯ ಕಾಲುಹಿಡಿದು ಕ್ಷಮೆ-ಯಾಚಿಸುತ್ತಾರೆ. ಚೌಡಮ್ಮನೂ ತನ್ನ ಪಾಪಕರ್ಮಗಳನ್ನು ನೆನೆದು ಅಗ್ನಿಚಿತೆ-ಯನ್ನೇರುತ್ತಾಳೆ. ಪ್ರಾಯಶ್ಚಿತಕ್ಕಿಂತ ಬೇರೊಂದಿಲ್ಲ.

**ಕಳ್ಳ ಯಾರು:** ಈ ಕಥೆ ನಮಗೆ ಹೆಜ್ಜೆಹೆಜ್ಜೆಗೂ ಕುತೂಹಲವನ್ನು ಕೆರಳಿಸುವ ಕಥೆಯಾಗಿದೆ. "ಮನುಷ್ಯ ದೇವರ ಸೃಷ್ಟಿಯಾದರೆ, ಕಳ್ಳಸಮಾಜದ ಸೃಷ್ಟಿ"[೧] ಎಂದು ಹೇಳುತ್ತಾ ಕಥೆಯ ನಾಯಕ ಕಳ್ಳ ಬಸವನ ಪ್ರಯೋಗ ಪರಿಣತಿ ತುಂಬಾ ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ.

ಬಸವ ಮದುವೆಯಾಗಿ ಒಂದು ವರ್ಷಕ್ಕೆ ನೆಂಟರಿಷ್ಟರನ್ನು, ಅತ್ತೆ ಮನೆಯವರನ್ನಲ್ಲ ಕರೆದು ಮಾಂಸದೂಟಹಾಕಿಸುತ್ತಾನೆ. ಆ ಹೋತ ಮಾವನ ಮನೆಯಿಂದ ಕದ್ದದ್ದೆ. ವಿಷಯ ತಿಳಿದು ಮಾವ ಕೋಪಗೊಂಡು ಹೊರಡುವುದು ಮಗಳಾದರೂ ಗಂಡನಿಗೆ ಬುದ್ಧಿ ಹೇಳಬಹುತ್ತಿತ್ತೆಂದುಕೊಳ್ಳುತ್ತಾನೆ. ಉಳಿದ ಮಾಂಸವನ್ನು ಮಾವನಿಗೆ ಹಿಂದಿರುಗಿಸಿ, ಹಣ ಎಷ್ಟು ಹೇಳಿಕೊಡುತ್ತೇನೆನ್ನುತ್ತಾನೆ.

ಬಸವನ ತಂದೆ ಈಶ್ವರ. ಆರ್ಥಿಕವಾಗಿ ಸ್ಥಿತಿವಂತರಾಗಿದ್ದರು. ಆ ಊರಿನ ಗೌಡರಿಬ್ಬರು ಅಣ್ಣತಮ್ಮಂದಿರಿಗೆ ತಂದು ಹಾಕಿ ಜಮೀನನ್ನು ವಶಪಡಿಸಿಕೊಳ್ಳುತ್ತಾರೆ. ಬಸವ ಮರಣನಂತರ ಅವರ ಮೇಲೆ ಸೇಡು ತೀರಿಸುವುದಕ್ಕಾಗಿ ಅವರ ತೋಟಗಳಲ್ಲಿ ಕಾಯಿ ಕದಿಯುವುದು, ಹೊಲದಲ್ಲಿ ತೆನೆ ಕೊಯ್ಯುವುದು ಚಟುವಟಿಕೆಗಳಲ್ಲಿ ಯಾರಿಗೂ ಸಂಶಯ ಬರದಹಾಗೆ ಕಳ್ಳತನವನ್ನು ವೃತ್ತಿಯನ್ನಾಗಿ ಸ್ವೀಕರಿಸುತ್ತಾನೆ. ತನಗೂ ಆಸ್ತಿ ಇದ್ದರೆ ಕಳ್ಳತನ ಮಾಡುತ್ತಿರಲಿಲ್ಲವೆಂದು-ಕೊಳ್ಳುತ್ತಾನೆ. ಬಸವನ ಹೆಂಡತಿ ಗಿರಿಯಮ್ಮನು ಗಂಡನ ಸಾಹಸ ಕೆಲಸವನ್ನು ಮೆಚ್ಚಿಕೊಳ್ಳುತ್ತಾಳೆ. ಅವನ ಧೈರ್ಯ ಗಿರಿಯಮ್ಮನು ಗಂಡನ ಸಾಹಸ ಕೆಲಸವನ್ನು

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಕಳ್ಳ ಯಾರು? ಪುಟ. ೧೫೭.

ಮೆಚ್ಚಿಕೊಳ್ಳುತ್ತಾಳೆ. ಅವನ ಧೈರ್ಯ ಪ್ರತಾಪಗಳಿಗೆ ಮೆಚ್ಚಿಕೊಂಡು ಹೆಂಗಸರು ಓಲೈಸುತ್ತಾರೆ. ವಿಷಯ ತಿಳಿದ ಗಿರಿಯಮ್ಮ, ನನ್ನ ಗಂಡ ಬಲಶಾಲಿ, ನನ್ನಂತೆ ಇತರರೂ ಅವನಿಂದ ಸುಖ ಪಡೆಯುವುದಾದರೆ, ನಾನೇಕೆ ಹೊಟ್ಟೆಕಿಚ್ಚು ಪಡಲಿ! ನನ್ನ ಗಂಡನ ಸುಖದಿಂದ ನನಗೆ ಹಿಗ್ಗೇ ಹೊರತು ಕುಗ್ಗಿಲ್ಲ. ನಿಮಗೇಕೆ ಹೊಟ್ಟೆಯುರಿ ಎಂದು ಹೇಳುವಾಗ ಗಂಡನ ಮೇಲಿನ ಪ್ರೀತಿ ಎಷ್ಟೆಂಬುದು ಕಂಡುಬರುತ್ತದೆ.

ಹೆಬ್ಬೂರಿನ ಮಠದ ದೇವಸ್ಥಾನದಲ್ಲಿ ಒಡವೆಗಳನ್ನು ಅಪಹರಿಸಿ ಹಂಚಿಕೊಳ್ಳುವುದಾಗಿ ಹೇಳಿದಾಗ ದೇವರ ಒಡವೆ ಕದ್ದರೆ ಒಳ್ಳೆಯೊದಾಗೋಲ್ಲ. ಬೇಡವೆಂದಾಗ ನಿನಗೆಬೇಡ. ನನ್ಗೆ ತಂದ್ಕೋಡು. ಕೊಟ್ಟ ಮಾತನ್ನು ಉಳಿಸಿಕೋ ಎನ್ನುತ್ತಾನೆ. ಕಳ್ಳನಾದರೂ ಅವನಲ್ಲೊಂದು ನೀತಿ ಇದೆ. ಹೆಂಡತಿ ಮಗುವನ್ನು ನೋಡಿಕೊಂಡು ಬರುತ್ತೇನೆಂದೇಳುತ್ತಾನೆ.

ಹೆಂಡತಿಗೆ ಗೌಡನ ಮನೆ ಬಿಡುವವರೆಗೆ ಲಾಕಾಪಿಗೆ ಹೋಗಿದ ಕಥೆಯನ್ನಲ್ಲಿ ವಿವರಿಸುತ್ತಾನೆ. ಒಪ್ಪತ್ತುಂಡು ನಿಶ್ಚಿಂತೆಯಿಂದಿರೋಣ ಎಂದು ಗಿರಿಯಮ್ಮ ಹೇಳಿದಾಗ ಕೊಟ್ಟಮಾತಿಗೆ ತಪ್ಪುವುದು ಹೇಗೆಂದು. ಇದನ್ನೆಲ್ಲ ದೇವರ ಇಚ್ಛೆ ಎಂದು ಇಪ್ಪತ್ತೈದು ರೂಪಾಯಿಕೊಟ್ಟು ಮಗಳ ಅಪ್ಪುಗೆಯಿಂದ ಬಿಡಿಸಿಕೊಂಡು ಹೋಗುತ್ತಾನೆ.

ಒಂದು ಮೇಲಿನ ವಸ್ತ್ರಧಾರಿಯಾಗಿ ಬಸವ ದೊಡ್ಡಗೌಡನ ಮುಂದೆ ಕಾಣಿಸಿಕೊಳ್ಳುತ್ತಾನೆ. ನನ್ನ ಗುರುತು ನಿನಗೆ ಸಿಗಲಿಲ್ಲ ಎಂದು ಕೇಳಿದಾಗ ಬಸವ ಎನ್ನುತ್ತಾನೆ. ನಿನ್ನ ಹೆತ್ತ ತಾಯಿತಂದೆಯರಿಗೂ ಗುರುತು ಸಿಗಲ್ಲವೆಂದು. ಪುರೋಹಿತರಿಗೆ ಏಳು ವರ್ಷ ಸೆರೆವಾಸ ಶಿಕ್ಷೆ ದೊರಕಿತೆಂದೂ, ಬಸವ ಇಷ್ಟೊಂದು ಸಂಪಾದನೆ ಮಾಡಿದ್ದೀರಿ. ಆಸೆಗೆ ಮಿತಿಯಿರಬೇಕೆಂದು ಹೇಳುವಾಗ ನನ್ನ ಆಜ್ಞೆಯನ್ನು ನಡೆಸಿಕೊಡು. ಮೈಸೂರಿನ ಚಾಮುಂಡಿದೇವಾಲಯದಲ್ಲಿ ಬೇಕಾದಷ್ಟು ಒಡವೆ, ಚಿನ್ನ ಬೆಳ್ಳಿ ಆಭರಣಗಳಿವೆಯಂತೆ. ನಿನ್ನ ಕೈಲಾದಷ್ಟು ತಂದುಕೊಡು ಜೈಲಿಗೆ ಹೋಗಲು ಸಿದ್ಧನಾಗು ಎನ್ನುತ್ತಾನೆ. ಗೌಡ ತನ್ನ ಅಧಿಕಾರ ದರ್ಪದಿಂದ ಬಡವರನ್ನು ಒಂದು ಹೊತ್ತು ಊಟ ನೀಡಿ ತಮಗೆ ಹೇಗೆ ಬೇಕೊ ಹಾಗೆ ದುಡಿಸಿಕೊಂಡು ಅವರು ಮಾತ್ರ ಬೆಳೆಯುತ್ತಾ ಸಾಗುತ್ತಾರೆ. ಬಸವ ಅದು ಸಾಧ್ಯವಿಲ್ಲವೆಂದುಕೊಂಡು ಚಾಮುಂಡಿ ಬೆಟ್ಟಕ್ಕೆ ಹೋಗಿ ಹೆಂಡತಿ ಮಗುವನ್ನು ನೆನೆದು ಬಂಡೆಯಿಂದ ಕೆಳಗುರುಳುತ್ತಾನೆ. ಅಲ್ಲಿದ್ದ ಜನರು ಬದುಕಿಸುತ್ತಾರೆ. ಅಲ್ಲೆ ಉಳಿಯುತ್ತಾನೆ. ಅವನಿಗೆ ನೆನಪಾಗುತ್ತಿದ್ದದ್ದು ಪುಟ್ಟಿಯೊಬ್ಬಳೆ ಶ್ರೀಮಂತ ಗೌಡರನ್ನು ಶಪಿಸುತ್ತಾನೆ. ತನ್ನ ಬಲಗೈಯನ್ನು ಹೆಬ್ಬಾಗಿಲ ಹೊಸ ಮೇಲಿನಿಂದ

ಅಪ್ಪಳಿಸಿಕೊಳ್ಳುತ್ತಾನೆ. ಎಡಗೈಯಲ್ಲಿ ತೆಗೆದುಕೊಂಡ ಕಲ್ಲುಗುಂಡಿನಿಂದ ಬಲಗೈ ಬೆರಳುಗಳನ್ನು ಚಚ್ಚುತ್ತಾನೆ. ಶ್ರೀಮಂತರು ಮಡದಿ ಮಕ್ಕಳೊಡಗೂಡಿ ಮೆರೆಯಲಿ. ಅವರ ಸುಖಕ್ಕಾಗಿ ಬಡವರು ಬರಿಹೊಟ್ಟೆಯಲ್ಲಿ ದುಡಿಯಲಿ' ಎನ್ನುವ ಮಾತಿನಲ್ಲಿ ಉಳ್ಳವರು ಇಲ್ಲದವರ ಮೇಲಿನ ದೌರ್ಜನ್ಯವನ್ನು ಕಣ್ಣಿಗೆ ಕಟ್ಟಿಕೊಡುತ್ತದೆ.

ಕೊನೆಗೊಮ್ಮೆ ಮಗಳನ್ನು ನೋಡಬೇಕೆಂದು ಊರಿಗೆ ಬರುತ್ತಾನೆ. ಆದರೆ ಹೆಂಡತಿ ಮಗಳಿಬ್ಬರೂ ಪ್ಲೇಗಿಗೆ ತುತ್ತಾದ ವಿಷಯ ತಿಳಿದು ಕುಸಿಯುತ್ತಾನೆ. ಕಳ್ಳ ಯಾರೆಂದು ಲೋಕವೇ ನಿರ್ಣಯಿಸಲಿ ಎಂದು ಹೋಗುತ್ತಾನೆ. ಎಲ್ಲಿಗೆ ಹೋದನೆಂಬುದು ಯಾರಿಗೂ ತಿಳಿಯುವುದಿಲ್ಲ.

ಇಲ್ಲಿ ಬರುವ ಕಥೆಯ ಪಾತ್ರಗಳಲ್ಲಿ ಒಂದಾದ ಕರೀಂ ಸಾಬಿಯ ಪ್ರಸಂಗ ಅವನ ಮಾತುಗಳಲ್ಲಿ ಇಣುಕುವ ಗ್ರಾಮೀಣ ಸೊಗಡಿನ ಮಾತುಗಳು, ನಮಗೆ ದರ್ಶನವನ್ನು ಮೂಡಿಸುವಲ್ಲಿ ಯಶಸ್ವಿಯಾಗಿದೆ.

**ಸೀಮಾ:** ಈ ಕತೆಯಲ್ಲಿನ ಮುಖ್ಯವಾದ ಪಾತ್ರವೆಂದರೆ ಸದಾಶಿವ. ದೇವಗೆರೆ ವಿಶ್ವವಿದ್ಯಾನಿಲಯದ ಕುಲಪತಿ. ಕುಲಪತಿಯ ಪದವಿಗೆ ಕಳಂಕ ತಂದ ಭ್ರಷ್ಟಚಾರಿ. ಆ ಹುದ್ದೆಗಳನ್ನು ಲಂಚರುಷುವತ್ತುಗಳಿಂದಲೇ ಪಡೆದ "ಹೆಂಡ ಹೆಣ್ಣು"ಗಳಲ್ಲೇ ಬದುಕನ್ನು ಕಾಣುವ ಚಿತ್ರ ನಮಗೆ ತೋರಿಸುತ್ತಾರೆ. ಇದು ಕೂಡ ಒಂದು ಸಾಮಾಜಿಕ ಪಿಡುಗಾಗಿ ಇಲ್ಲಿ ಸಮರ್ಥವಾಗಿ ಚಿತ್ರಣಗೊಂಡಿದೆ. ಇವರ ಆಕ್ರಮಣಕ್ಕೆ ನಯವಂಚನೆಗೆ ಸಿಲುಕಿದ ಮುಗ್ದಸೀಮಾ. ಸೀಮಾಳನ್ನು ಹೇಗೆ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡರು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಈ ಕತೆ ಭೀಭತ್ಸರಸವನ್ನು ಪಡೆದುಕೊಂಡು ಸಾಮಾಜಿಕ ಆಯಾಮ ಹೊಂದಿರುವ ಕಥೆ ಇಲ್ಲಿ ಕುಡಿತ, ಕಾಮಲಾಲಸೆ, ಭ್ರಷ್ಟಾಚಾರ ಕಣ್ಣಿಗೆ ರಾಚುವಂತಹ ನೈತಿಕ ಅಧಃಪತನ ಎಲ್ಲವೂ ಈ ಒಂದು ಸಣ್ಣಕಥೆಯಲ್ಲಿ ಹಿಡಿದಿಡುವ ಸಾಹಸವನ್ನು ಕಥೆಗಾರರು ಮಾಡಿರುವುದು ಶ್ಲಾಘನೀಯವಾದುದಾಗಿದೆ.

**ಕೆಂಪು ಇಂಡಿಯನ್‌ನ ಆತ್ಮಕಥೆ:** ಈ ಕಥೆಯು ನಮಗೆ ಜಾನಪದ ಜೀವನ ವ್ಯಾಖ್ಯಾನವಾಗಿ ಗಮನಸೆಳೆಯುತ್ತದೆ. ಇದು ಒಂದು ಜನಾಂಗದ ಕಣ್ಣು ತೆರೆಸುವ ಕಥೆಯಾಗಿ ಮೂಡಿಬಂದಿದೆ.

ಸಹಸ್ರಾರು ವರ್ಷಗಳ ಹಿಂದಿನಮಾತು. ಇಪ್ಪತ್ತೈದು ಸಾವಿರ ವರ್ಷಗಳಿ-'ಗಿಂತಲೂ ಹಿಂದಿನದು. ಆಗ ಎಲ್ಲರೂ ಅಲೆಮಾರಿಗಳು. ಬೇಟೆಯಾಡುವುದೇ ವೃತ್ತಿ. ಯುದ್ಧಕಾಲದಲ್ಲಿ ಮೈಗೆಲ್ಲಿ ಕೆಂಪು ಬಣ್ಣಹಚ್ಚಿಕೊಳ್ಳುತ್ತಿದ್ದರಿಂದ ಅವರು ಕೆಂಪು ಇಂಡಿಯನ್ನರೆಂದು ಪ್ರಸಿದ್ಧಿ ಮಕ್ಕಳು ಮತ್ತು ಹೆಂಗಸರು ಗೆಡ್ಡೆಗೆಣಸುಗಳನ್ನು

ಹಣ್ಣುಹಂಪಲುಗಳನ್ನು ಸಂಗ್ರಹಿಸುತ್ತಾನೆ. ಬೇಟೆಯಾಡುವ ಕಲ್ಲಿನ ಮತ್ತು ದಂತದ ಉಪಕರಣಗಳನ್ನು ತಯಾರಿಸುತ್ತಾರೆ. ಪ್ರಾಣಿಗಳ ಜೀವನಕ್ಕಾಧಾರವಾಗುತ್ತವೆ. ಆಯ್ದಕ್ಕಿ ಲಕ್ಕಮ್ಮ ಹೇಳಿರುವ ಹಾಗೆ. ಮಾಡು, ತರು, ಉಣ್ಣು ಎಂಬಂತೆ ಅವಶ್ಯಕತೆಗಿಂತ ಹೆಚ್ಚಾಗಿ ಏನನ್ನು ಶೇಖರಿಸುತ್ತಿರಲಿಲ್ಲ. ಆನಂತರ ನಾಗರಿಕತೆಯನ್ನನ್ನುಸರಿಸುತ್ತಾರೆ. ಆದರೆ ಒಗ್ಗಟ್ಟಿಲ್ಲದೆ ಕಚ್ಚಾಡುತ್ತಿದ್ದರು. ಪಾಪ ಪರಿಹಾರಕ್ಕಾಗಿ ನರರನ್ನು ಬಲಿಕೊಡುತ್ತಿದ್ದರು. ನಮ್ಮ ಜನರ ಮೂಢನಂಬಿಕೆಯನ್ನು ತೋರಿಸುತ್ತದೆ. ಬಿಳಿಯರು ಕೊಲಂಬಸ್ ಬರುತ್ತಾನೆ. ದೇಶದ ಸಂಪತ್ತನ್ನು ಯುರೋಪಿನಲ್ಲಿ ಪ್ರಚಾರಮಾಡುತ್ತಾನೆ. ಬಿಳಿಯರು ಹಣದಾಸೆಯನ್ನು ತೋರಿಸಿ ಫಲವತ್ತಾದ ಭೂಮಿಯನ್ನು ಕಬಳಿಸುತ್ತಾರೆ. ಇದಕ್ಕೆ ಉದಾ: ೧೮೫೫ರಂದು ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ಫ್ರಾಂಕ್ಲಿನ್ ಪಿಯರ್ಸ್‌ನಿಂದ ಬಂದ ಪತ್ರವನ್ನೋದಿ ದಿಗ್ಭ್ರಮೆಗೊಳ್ಳುತ್ತಾನೆ.

ಬಾನು, ಬುವಿ ಇಲ್ಲದಿದ್ದರೆ ಬದುಕುವುದೇ ಕಷ್ಟ ಇವೆರಡೆ ಸಕಲ ಜೀವರಾಶಿಗಳಿಗೆ ಆಧಾರ. ಬುವಿಯ ಮೇಲಿರುವ ಯಾವುದೇ ವಸ್ತು, ಪಶುಪಕ್ಷಿಗಳನ್ನಾಗಲಿ, ಕನಿಷ್ಠಾವಶ್ಯಕತೆಗಿಂತ ಮಿಗಿಲಾಗಿ ಬಳಸುವುದು ದೈವದ್ರೋಹವೆನ್ನುತ್ತಾರೆ.

ನಮ್ಮ ಪ್ರದೇಶದಲ್ಲಿರುವ ಪ್ರಾಣಿಗಳನ್ನು ಅದಕ್ಕಾಗಿ ಕೊಲ್ಲದೆ ಸೋದರರಂತೆ ಮಾಡಬೇಕು. ಕಾಡುಗಳನ್ನು ನಾಶಮಾಡದೆ, ಪ್ರಕೃತಿ ಮಾತೆಯನ್ನು ಆರಾಧಿಸಬೇಕು. ನಾವು ಪ್ರೀತಿಸುವ ಹಾಗೆ ನೀವು ಪ್ರೀತಿಸಬೇಕು. ಪರಿಸರ ಮಾಲಿನ್ಯಗೊಳಿಸಬೇಡಿ. ಭೂಮಿಯನ್ನು ನಿಮ್ಮ ಮಕ್ಕಳಿಗೆ ಬಿಟ್ಟುಕೊಡಿ. ಕನ್ನಡಿಗರು ಜಗತ್ತಿನ ಶಾಂತಿಗಾಗಿ ಸಕಲ ತ್ಯಾಗಗಳಿಗೂ ಸಿದ್ದರೆಂದು, ದೇಜಗೌರವರು ಅಭಿವ್ಯಕ್ತಪಡಿಸಿದ್ದಾರೆ.

**ಪರಿಸರದ ಶಿಶು:** ಈ ಕತೆಯ ಚೆಲುವಮ್ಮ ಧರ್ಮಣ್ಣನ ಬಾಲ್ಯದಿಂದ ಹೆಜ್ಜೆ ಹೆಜ್ಜೆಗೂ ಪರಿಸರ ಯಾವ ರೀತಿಯ ಪರಿಣಾಮಬೀರುತ್ತದೆಂಬುದು ತಿಳಿದುಬರುತ್ತದೆ.

ಚೆಲುವಮ್ಮ ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿದವಳು. ಗ್ರಾಮೀಣ ಪರಿಸರದ ಸುಖವನ್ನನ್ನುಭವಿಸುತ್ತಿರುತ್ತಾಳೆ. ಬೆಳಗೆದ್ದ ಕೂಡಲೇ ರಾಗಿಬೀಸುವ ತಾಯಿಯ ತೊಡೆಯ ಮೇಲೆ ಮಲಗಿ ನಿದ್ದೆಮಾಡಿ ಕುರಿಮರಿಗಳನ್ನು ಮುದ್ದಿಸಿ ಗೋಡೆಮಣ್ಣಿನಿಂದ ಹಲ್ಲುಜ್ಜಿ ಮುಖತೊಳೆದು ರಾಗಿರೊಟ್ಟಿ ತಿಂದು, ತಾಯಿಯ ಜೊತೆಯಲ್ಲಿ ಕುರಿದನ ಮೇಯಿಸಲು ಕಾಡಿಗೆ ಹೋಗುವುದು, ಮರಹತ್ತುತ್ತಾಳೆ. ತನ್ನೋರಗೆಯ ಹೆಣ್ಣುಮಕ್ಕಳೊಡನೆ ಜನಪದಗೀತೆಗಳನ್ನಾಡುತ್ತ, ಕೋಲಾಟ ಮದುವೆಯಾಟವನ್ನಾಡುತ್ತಿದ್ದಳು. ಕುರಿ ಮೇಕೆ ಮೇಯಿಸುವಾಗ ಅವುಗಳ ರತಿಕ್ರೀಡೆ

ಚೆಲುವಮ್ಮನ ಕುತೂಹಲವನ್ನುಂಟು ಮಾಡುತ್ತಿತ್ತು. ತನಗರ್ಥವಾಗದ ಸೃಷ್ಟಿಯ ರಹಸ್ಯ ಅವಳ ಮನದಲ್ಲಿ ರೂಮಿಕ್ಕುತ್ತ ಚೋದಕ ಚಿತ್ರಗಳಾಗಿ ವಿಕಾಸಗೊಳ್ಳುತ್ತದೆ. ನಾಚಿಕೆಯ ಮುಗ್ಧೆಯಾಗುತ್ತಾಳೆ. ಪ್ರಾಯವಸ್ಥೆಗೆ ಬರುತ್ತಾಳೆ.

ಮೂಡಗೆರೆ ಪಟೇಲ ಚಿನ್ನೇಗೌಡ ತಿಮ್ಮಮ್ಮನೊಂದಿಗೆ ಮದುವೆಯಾಗಿದ್ದರೂ ಚೆಲುವಮ್ಮನನ್ನು ಮದುವೆ ಮಾಡಿಕೊಡಬೇಕೆಂದು, ಇಲ್ಲದಿದ್ದರೆ ಹೊತ್ಕೊಂಡು ಹೋಗುತ್ತಾನೆಂದು ತಿಳಿಸುತ್ತಾನೆ. ಚಿನ್ನೇಗೌಡನಿಗಿಷ್ಟವಿಲ್ಲ. ಆದರೆ ಚೆಲುವಮ್ಮನೆ ಅವನನ್ನು ಮದುವೆಯಾಗುವುದಾಗಿ ಹೇಳಿ ತಂದೆಗೆ ಪಾರಾಗುವಂತೆ ಹೇಳುತ್ತಾಳೆ. ಚಿನ್ನೇಗೌಡನಲ್ಲಿ ಕಾಮವೊಂದು ರೋಗವಾಗಿ ಅವ್ಯವಹಾರಗಳಲ್ಲಿ ತೊಡಗಿರುತ್ತಿತ್ತು. ಚೆಲುವಮ್ಮನಿಗೆ ಲೈಂಗಿಕ ತೃಪ್ತಿಪಡಿಸುವುದಕ್ಕಾಗುತ್ತಿರಲಿಲ್ಲ. ಸವತಿಗೆ ಇವಳನ್ನು ಕಂಡರಾಗದು. ಚನ್ನೇಗೌಡನ ಕೊಲೆಯಾದ ನಂತರ ತವರಿಗೆ ಹಿಂದಿರುಗುತ್ತಾಳೆ.

ಚನ್ನಂಗೆರೆಯ ಕಳಸೇಗೌಡ ಅವಿದ್ಯಾವಂತ, ಪ್ರಾಮಾಣಿಕ ವ್ಯಕ್ತಿ, ಗಟ್ಟಿಮೈಕಟ್ಟುಳ್ಳ ಎಣ್ಣೆಗಂಪಿನ ವ್ಯಕ್ತಿ, ಇಬ್ಬರು ಹೆಣ್ಣು ಮಕ್ಕಳನ್ನು ಮದುವೆ ಯಾಗಿರುತ್ತಾನೆ. ಹೊಂದಾಣಿಕೆ ಇಲ್ಲದೆ ಮೊದಲ ಹೆಂಡಿತಿಯನ್ನು ಬಿಟ್ಟ, ಎರಡನೆಯ ಹೆಂಡತಿ ತೀರಿಕೊಳ್ಳುತ್ತಾಳೆ, ಮಕ್ಕಳಾಗಿರುವುದಿಲ್ಲ, ವಯಸ್ಸಾದ್ದರಿಂದ ಮೂರನೆಯ ಮದುವೆಗೆ ಹೆಣ್ಣು ಸಿಗುತ್ತಿರಲಿಲ್ಲ, ಕೂಡಾವಳಿಗಾಗಿ ಹೆಣ್ಣು ಹುಡುಕುತ್ತಿರುವಾಗ ಚೆಲುವಮ್ಮನೊಂದಿಗೆ ಕೂಡಾವಳಿಯಾಗುತ್ತದೆ. ಇವರ ಸಂಸಾರ ಹಾಲು ಜೇನಿನಂತಿರುತ್ತದೆ. ಚೆಲುವಮ್ಮನಿಗೆ ಮೂರು ಸಲ ಏಳೆಂಟು ತಿಂಗಳಲ್ಲಿ ಮೈಯಿಳಿಯುತ್ತದೆ, ದೇವರ ಹರಕೆಯಿಂದಾಗಿ ನಾಲ್ಕನೆಯ ಗರ್ಭ ನಿಲ್ಲುತ್ತದೆ. ಮೊದಲನೆಯ ಮಗು ಗಂಡುಮಗುವಾಗುತ್ತದೆ. ಎರಡು ವರ್ಷಕ್ಕೊಂದರಂತೆ ಐವರು ಮಕ್ಕಳಾಗುತ್ತಾರೆ. ಮಧ್ಯದವನು ಧರ್ಮಣ್ಣ, ಇಡೀ ಸಂಸಾರ ಮಲಗುತ್ತಿದ್ದುದು ಪಡಸಾಲೆಯಲ್ಲಿ. ಈಚಲ ಚಾಪೆಯ ಮೇಲೆ ಹೊದ್ದುಕೊಳ್ಳಲು ಒಂದೇ ಒಂದು ದೊಡ್ಡ ಜಾಡಿ. ಇರುಕಿನಲ್ಲಿಯೇ ತಮ್ಮ ದಾಂಪತ್ಯ ಕರ್ತವ್ಯವನ್ನು ನೆರವೇರಿಸುತ್ತಿದ್ದರು. ಇದು ಮಕ್ಕಳ ಮೇಲೆ ಪರಿಣಾಮ ಬೀರುತ್ತದೆ.

ಹೈಸ್ಕೂಲಿಗೆ ಐದು ಮೈಲಿ ದೂರದ ಪಟ್ಟಣಕ್ಕೆ ನಡೆದುಕೊಂಡು ಹೋಗಿಬರುತ್ತಿರುತ್ತಾನೆ. ಒಂದೆರಡು ತಿಂಗಳ ಕಾಲ ಯಾವುದೋ ಕಾರಣಕ್ಕಾಗಿ ಗೊತ್ತಿರುವವರ ಮನೆಯಲ್ಲಿ ಉಳಿದುಕೊಳ್ಳುತ್ತಾನೆ. ಆ ಮನೆಯಲ್ಲಿ ಗಂಡ ಬಿಟ್ಟ ಹೆಣ್ಣೊಬ್ಬಳ ಕಾಟದಿಂದ ತಪ್ಪಿಸಿಕೊಂಡು ಶ್ರೀಕೃಷ್ಣನ ಉಪಾಸಕನಾಗಿರುವುದರಿಂದ ತಪ್ಪಿಸಿಕೊಂಡು ಬರುತ್ತಾನೆ.

ಡಿಗ್ರಿ ವ್ಯಾಸಂಗಕ್ಕಾಗಿ ರಾಮಕೃಷ್ಣಾಶ್ರಮ ವಿದ್ಯಾರ್ಥಿ ನಿಲಯದಲ್ಲಿರುತ್ತಾನೆ. ವಿವೇಕಾನಂದ, ರಾಮಕೃಷ್ಣರ ವ್ಯಾಸಂಗದಿಂದಾಗಿ ಪೂಜೆ ಧ್ಯಾನಗಳಿಂದಾಗಿ ಧೀಶಕ್ತಿ ಮತ್ತು ಸಂಯಮಶಕ್ತಿ ಹೆಚ್ಚಿಸುತ್ತದೆ ಮತ್ತು ಬಲವಾಗುತ್ತದೆ. ಉದ್ಯೋಗ ಲಭಿಸಿ ಮದುವೆಯಾಗುತ್ತದೆ. ಆತನ ಸ್ನೇಹಿತ ಚಲುವೆಗೌಡ ಪೊಲೀಸ್ ಸಬ್‌ಇನ್ಸ್‌ಫೆಕ್ಟರ್. ಧರ್ಮಣ್ಣನನ್ನು ವೇಶ್ಯಾಗೃಹಕ್ಕೆ ಕರೆದುಕೊಂಡು ಹೋಗುತ್ತಾನೆ. ಮಗಳು ಹೆಂಡತಿಯನ್ನು ನೆನೆದು ಹೊರ ನಡೆಯುತ್ತಾನೆ. ಯಾವ ಕಡೆ ನೋಡಿದರೂ ಅವನಿಗೆ ಪ್ರಪಂಚದಲ್ಲಿ ಕಾಣಸಿಗುವುದು ಲೈಂಗಿಕಕ್ರಿಯೆ ಅದರಲ್ಲಿ ಸೃಷ್ಟಿ ಸೌಂದರ್ಯವನ್ನು ಕಾಣುತ್ತಾನೆ. ಶೃಂಗಾರ ಕಲೆಯ ಧ್ಯಾನದಲ್ಲಿ ಮುಳುಗುತ್ತಾನೆ. ವೇಶ್ಯೆಯರ ಸಮಸ್ಯೆಗಳನ್ನರಿಯಬೇಕೆಂದು ಚೆಲುವೇಗೌಡನೊಂದಿಗೆ ಬಂದಾಗ ನಾಯಕಸೇನಿ ಧರ್ಮಣ್ಣರವರ ಮಾತುಗಳಲ್ಲಿ ವೇಶ್ಯಾವೃತ್ತಿ ಇಂದಿನ ಸ್ಥಿತಿಗತಿ ಮನದಟ್ಟಾಗುತ್ತದೆ. ಮೂಲಕಾರಣ ಆರ್ಥಿಕ ಸಮಸ್ಯೆ, ಪುರುಷರಿಂದಲೇ ಏನೋ ಎನ್ನುವಂತಿದೆ.

ಧರ್ಮಣ್ಣನ ಸಹಪಾಠಿ ಸುಬ್ಬಣ್ಣಾಚಾರ್‌ರೊಬ್ಬರು ಮಾತನಾಡುವಾಗ, ಚೆಲುವೇಗೌಡ ಲಂಪಟ, ಅವನ ಸಹವಾಸ ಒಳ್ಳೆಯದಲ್ಲ ಎಂದಾಗ ಸಮಾಜವನ್ನು ತಿದ್ದಬೇಕೇ ಹೊರತು ದ್ವೇಷಿಸಬಾರದು, ಇದ್ದಿಲೂ ವಜ್ರವಾಗುತ್ತದಲ್ಲವೇ? ಎಂದಾಗ 'ಆದರೆ ಗುರುಕೃಪೆಗೆ ಪಾತ್ರರಾದ ಸಾಧ್ವಿ ಸತಿಯನ್ನು ಕೈಹಿಡಿದಿರುವ ಚಿನ್ನದಂಥ ಮಕ್ಕಳನ್ನು ಪಡೆದಿರುವ ನೀವು ಸಹವಾಸ ದೋಷದಿಂದ ಕೆಟ್ಟದಾರಿ ಹಿಡಿಯಬಾರದೆಂದು, ನಿಮ್ಮ ಸಂಪರ್ಕದಿಂದ ಚೆಲುವೇಗೌಡ ಉತ್ತಮನಾದರೆ ಸಂತೋಷ ಎನ್ನುವ ಮಾತು ಧರ್ಮಣ್ಣನ ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ.

ಧರ್ಮಣ್ಣ ಸುಬ್ಬಣ್ಣಾಚಾರ್‌ರವರಿಗೆ ಒಂದು ಪತ್ರ ಬರೆದು ನಿವೃತ್ತಿ ಘೋಷಿಸುವುದಾಗಿ ಹೇಳುತ್ತಾನೆ. "ಚೆಲುವೇಗೌಡ ನನ್ನಂತೆ ಪರಿಸರದ ಶಿಶು. ಅವನ ಅವಗುಣಗಳಿಗೆ ಅನುವಂಶೀಯ ಗುಣಗಳು ಹಾಗೂ ಪರಿಸರದ ಸನ್ನಿವೇಶ ಸಂದರ್ಭಗಳೇ ಕಾರಣ. ಜೊತೆಗೆ ಅವನು ಈಗಿರುವ ಪರಿಸರವೂ ಅಂಥದೆ, ಸಂಯಮ ಸಾಧನೆಗನುಗುಣವಾದ ವಾತಾವರಣ ಅವನಿಗೆ ದೊರಕಿಲ್ಲ. ಅದರಿಂದಾಗಿ ನನಗವನ ಬಗ್ಗೆ ಪೂರ್ಣ ಸಹಾನುಭೂತಿಯಿದೆ, ನಾನು ಹುಟ್ಟಿ ಬೆಳೆದ ವಂಶವಾಗಲಿ, ಪರಿಸರವಾಗಲಿ, ಅವನದಕ್ಕಿಂತ ಭಿನ್ನವಲ್ಲ. ಆದರೆ ನನಗೊದಗಿರುವ ವಿದ್ಯೆ, ಲಭಿಸಿರುವ ಗುರುಕೃಪೆ, ದೊರಕೊಂಡಿರುವ ಪರಿಸರ ಹಾಗೂ ಅವಕಾಶ ನನ್ನ ಹಿರಿಯರಿಗಿರಲಿಲ್ಲ. ಆದ್ದರಿಂದ ನನ್ನ ಹಿರಿಯರನ್ನು ನಾನು ದೂರಲಾರೆ, ನನ್ನ ಎಲ್ಲ ಅವಗುಣ ದೌರ್ಬಲ್ಯಗಳಿಗೆ ನಾನೇ ಕಾರಣ. ಆದರೆ ನಾನು ಹುಟ್ಟಿದ ಪರಿಸರ ನನ್ನನ್ನು ಎಡೆಬಿಡದೆ ಕಾಡಿದೆಯೆಂಬುದಂತು ನಿಜ, ಪರಿಸರದ ಶಿಶು ನಾನು,

ಪರಿಸರದ ಬಲಿಪಶು ನಾನು"[1] ಎಂದು ತನ್ನ ಮನಸ್ಸಿನಲ್ಲಿಯ ಕಾಮದ ಪ್ರಸಾದನೆಗೆ ಪರಿತಪಿಸುತ್ತಿದೆ ಆದರೆ ಚೆಲುವೇಗೌಡ ಎಲ್ಲರಿಗೂ ಕಾಣುವಂತೆ ವರ್ತಿಸುತ್ತಿದ್ದನೆಂದು ತನ್ನನ್ನು ತಾನೇ ಅಳಿದುಕೊಳ್ಳುತ್ತಾನೆ.

**"ತತ್ವಜ್ಞಾನಿ":** ಈ ಕತೆಯು (ಬಸವ ಭಕ್ತ ತತ್ತ್ವಜ್ಞಾನಿಯನ್ನು ಕುರಿತು ಹೇಳುತ್ತದೆ). ಯತೀಶ್ವರರು ಬಸವಭಕ್ತನ ನಡುವೆ ಕುರಿತ ಮಾತುಕತೆಯಾಗಿದೆ. ಪರರ ದುಡ್ಡಿಗೆ, ಪರರ ಹೆಂಡತಿಯರಿಗೆ ಆಸೆಪಡುವುದು ಮಹಾಪಾಪ ಎಂದಾಗ ಈ ಲೋಕದಲ್ಲಿ ಜವಾನನಿಂದಿಡಿದು ಮುಖ್ಯಮಂತ್ರಿಗಳವರೆಗೆ ಆಶಿಸುವವರೆ. ತಮ್ಮ ಪಾಪ ಪರಿವರ್ತನೆಗಾಗಿ ತಿರುಪತಿ ತಿಮ್ಮಪ್ಪನ ಹುಂಡಿಗೆ ಹಣ ಸುರಿವವರು ಅಂಥವರೆ. ಇದನ್ನು ನೋಡಿದರೆ ನಮ್ಮ ರೆಡ್ಡಿಯವರು ನೆನಪಿಗೆ ಬರುತ್ತಾರೆ.

ತತ್ತ್ವಜಾನಿಯ ಬಾಲ್ಯದಲ್ಲಿಯೇ ವೇದೋಪನಿಷತ್ತುಗಳ ಅಭ್ಯಾಸವಾಗಿತ್ತು. ಸ್ನಾತಕ ಮತ್ತು ಸ್ನಾತಕೋತ್ತರ ತರಗಳಲ್ಲಿ ತತ್ತ್ವಶಾಸ್ತ್ರದ ವ್ಯಾಸಂಗ ಮಾಡಿದ್ದರು. ಪುರೋಹಿತಶಾಹಿ ಪವಿತ್ರ ಗ್ರಂಥಗಳನ್ನು ತಮಗೆ ಬೇಕಾದಂತೆ ತಿರುಚುತ್ತಾರೆ. ಜಗತ್ತಿನ ಯುದ್ಧ, ಪಾಪಕೃತ್ಯ, ದುಃಖ ಇತ್ಯಾದಿ ದುಷ್ಕೃತ್ಯಗಳಲ್ಲಿ ಅರ್ಧ ಭಾಗ ಪುರೋಹಿತಶಾಹಿಯ ದೌರ್ಜನ್ಯವನ್ನು ಉದಾಹರಿಸುತ್ತಾರೆ. ಅವರ ಮಾತಿನಲ್ಲಿ ಸತ್ಯಾಂಶವಿದೆ. ಭಗವಂತ ಸರ್ವಾಂತರಾಮಿ ಶಕ್ತಿ. ಶರೀರ ಮನಸ್ಸು ಆಧ್ಯಾತ್ಮ ಶಕ್ತಿಗಳ ಮೊತ್ತವೇ ಮನುಷ್ಯನ ಲಕ್ಷಣ. ಅದೇ ನಾಗರಿಕತೆಯೆಂದು ಕುವೆಂಪುರವರ ಹೇಳಿರುವ ಹಾಗೆ ವಿಶ್ವಮಾನವತ್ವವನ್ನು ತಿಳಿಸುತ್ತಾರೆ. ರಕ್ತದ ಒತ್ತಡದಂತೆ ಲೈಂಗಿಕತೆಯೂ ಒಂದು ಬುದ್ದಿ ಚುರುಕಾಗುತ್ತದೆ. ಏಕಾಗ್ರತೆ ಸಾಧ್ಯವಾಗುತ್ತದೆ. ಅತೀಂದ್ರಿಯ ಕ್ರಿಯೆಯ ಸರಾಗವಾಗಿ ಸಾಗುತ್ತದೆ. ನಿಷ್ಠಾಯುಕ್ತ ಏಕಪತ್ನಿ ವಿವಾಹವೇ ಆದರ್ಶಪ್ರಾಯವೆನ್ನುತ್ತಾರೆ. ತತ್ತ್ವಜ್ಞಾನಿಯಾದರೂ ಕಾಮಲೀಲೆಯಲ್ಲಿ ಬಿದ್ದಿರುವುದು. ಆದರೆ ದೊಡ್ಡ ಕವಿ ತತ್ವಜ್ಞಾನವಿಲ್ಲದಿದ್ದರಾಗಲಾರ.

'ಇಂದ್ರಿಯ ನಿಗ್ರಹವ ಮಾಡಿದಡೆ ಹೊಂದುವುವು ದೋಷಗಳು ಮುಂದೆ ಬಂದು ಕಾಡುವುವು ಪಂಚೇಂದ್ರಿಯಗಳು' ಎಂಬ ಬಸವೇಶ್ವರರ ವಚನವನ್ನು ಬಸವ ಭಕ್ತ ಉದ್ಧರಿಸುತ್ತಾರೆ.[2] ಅದೆಷ್ಟು ಸತ್ಯ.

**ಮಹಾಪಂಡಿತ ಕಾಲ್ಡ್‌ವೆಲ್‌ನ ಕಥೆ:** ಈ ಕತೆಯಾ ಭಾಷಾವಿಜ್ಞಾನಿ ಕ್ರಿಸ್ತಪಾದ್ರಿಯೊಬ್ಬನ ಜ್ಞಾನದಾಹದ ಕಥೆಯಾಗಿದೆ. ೧೮೧೪ರಲ್ಲಿ ಕಾಲ್ಡ್‌ವೆಲ್ ಹುಟ್ಟಿದ್ದು ಐರ್ಲೆಂಡಿನ ಸಣ್ಣದೊಂದು ಹಳ್ಳಿಯಲ್ಲಿ ಗ್ಲಾಸೊ ವಿಶ್ವವಿದ್ಯಾನಿಲಯದ ಗ್ರೀಕ್ ಪ್ರಾಧ್ಯಾಪಕ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಪರಿಸರದ ಶಿಶು, ಪುಟ. ೨೦೨.
೨. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ತತ್ವಜ್ಞಾನಿ, ಪುಟ. ೨೧೦.

ಡೇನಿಯಲ್ ಸ್ಕಾಂಡ್ ಪೋಕ್. ತೌಲನಿಕ ಭಾಷಾ ವಿಜ್ಞಾನದ ಪರಿಣತರಾಗಿದ್ದರು. ಅವರ ಪ್ರಭಾವ ಕಾಲ್ಡ್‌ವೆಲರ ಮೇಲಾಗುತ್ತದೆ. ೧೮೩೦ರಲ್ಲಿ ಲ್ಯಾಟಿನ್ ಕ್ರಿಶ್ಚಿಯನ್ ಸೊಸೈಟಿಯು ಮತ ಪ್ರಚಾರಕ್ಕೆ ಇಂಡಿಯಾಕ್ಕೆ ಬಂದಾಗ ಅಪರಿಚಿತ ಸ್ಥಳ. ವಾತಾವರಣದಲ್ಲಿ ಒಗ್ಗದ ಹವಾಮಾನದಲ್ಲಿ ತನ್ನನ್ನು ತಾನು ಇತರರೊಂದಿಗೆ ಬಗ್ಗಿಸಿಕೊಳ್ಳುತ್ತಾನೆ. ಚೆನ್ನೈ ಆತನ ಕಾರ್ಯಕ್ಷೇತ್ರವಾಗಿರುತ್ತದೆ. ಇಂಗ್ಲೆಂಡಿನಿಂದ ಹೊರಟ ಹಡಗು ಗುಡ್ ಹೋಪ್ ಭೂಶಿರವನ್ನು ಬಳಸಿಕೊಂಡು ಹೋಗುವಾಗ ಸಮಯ ಹಾಳುಮಾಡಬಾರದೆಂದು ಅದೇ ಹಡಗಿನಲ್ಲಿದ್ದ ಚಾರ್ಲ್ಸ್‌ರ ಫಿಲಿಪ್ ಬ್ರೌನ್ ತೆಲುಗು ವಿದ್ವಾಂಸನನ್ನು ಪರಿಚಯಿಸಿಕೊಂಡು ತೆಲುಗು ಮತ್ತು ಸಂಸ್ಕೃತ ಕಲಿಯಲು ಪ್ರಾರಂಭಿಸುತ್ತಾನೆ. ಅವನ ಸಮಯ ಪ್ರಜ್ಞೆ ಮೆಚ್ಚುವಂತಹದ್ದು. ತಿರುನೆಲ್ವೇಲಿಯಲ್ಲಿ ಪಾದಯಾತ್ರೆ ಮುಖಾಂತರ ಮತಪ್ರಚಾರ ಆರಂಭಿಸುತ್ತಾನೆ. ದಕ್ಷಿಣ ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯವಲ್ಲ. ಅವು ದ್ರಾವಿಡವೆಂಬ ಪ್ರತ್ಯೇಕ ವರ್ಗಕ್ಕೆ ಸೇರಿದನೆನ್ನುತ್ತಾನೆ.

೧೮೪೧ರಲ್ಲಿ ತಿರುನೆಲ್ವೇಲಿ ತಲುಪಿ ತಮಿಳಿನಲ್ಲಿ ಪ್ರವಚನ ನಡೆಸಿ ಪ್ರಿಯನಾಗುತ್ತಾನೆ. ಇಡೆಯಂಗುಡಿಯನ್ನು ಪ್ರವೇಶಿಸುತ್ತಾನೆ. ಆ ಊರು ಮರುಳುಗಾಡಿನ ಮಧ್ಯದಲ್ಲಿದ್ದಂತೆ ಇದೆ. ಅಲ್ಲಿ ಪಾದ್ರಿಗೃಹ ಮೊದಲುಗೊಂಡು ಅಲ್ಲಿಯ ಎಲ್ಲ ಮನೆಗಳು ಬಾಳುವ ಸ್ಥಿತಿಯಲ್ಲಿದ್ದರಿಂದ ಊರವರ ಸಹಾಯದಿಂದ ಮನೆಗಳನ್ನು ಸರಿಪಡಿಸಿದ್ದಲ್ಲದೆ, ಜನರ ಜೀವನಮಟ್ಟವನ್ನೇರಿಸಲು ಸುಸಂಸ್ಕೃತರನ್ನಾಗಿ ಮಾಡಲು ಶಿಕ್ಷಣ ಅನಿವಾರ್ಯವೆಂದು ಶಾಲೆಯನ್ನಾರಂಭಿಸುತ್ತಾನೆ. ಕ್ರೈಸ್ತಮತ ಪ್ರಚಾರದ ಜೊತೆಗೆ ಶಿಕ್ಷಣದ ಮಹತ್ವವನ್ನು ತಿಳಿಸುತ್ತಾನೆ.

ನಾಗರಕೋಯಿಲ್ ಕ್ರಿಶ್ಚಿಯನ್ ಮತ ಪ್ರಚಾರಕರ ಚಟುವಟಿಕೆಗಳ ಕೇಂದ್ರವಾಗಿತ್ತು. ಚಾರ್ಲ್ಸ್‌ಮಾಲ್ಡ್‌ನ ಮಗಳು ಎಲಿಜಳೊಂದಿಗೆ ಮದುವೆ-ಯಾಗುತ್ತಾನೆ. ೧೮೫೭ರ ಜೂನ್ ತಿಂಗಳಲ್ಲಿ ಮಹಾಕೃತಿ. ಎ ಕಂಪೇರಟಿವ್ ಗ್ರಾಮರ್ ಆಫ್ ದ್ರಾವಿಡಿಯನ್ ಆರ್ ಸೌತ್ ಇಂಡಿಯನ್ ಫೇಮಿಲಿ ಆಫ್ ಲ್ಯಾಂಗ್ವೇಜಸ್. ಇಡೆಯಂಗುಡಿಯ ಚರ್ಚ್ ಕಟ್ಟಡವನ್ನು ಪೂರೈಸುತ್ತಾನೆ. ಬೈಬಲನ್ನು ತಮಿಳಿಗೆ ಭಾಷಾಂತರಿಸಲಾರಂಭಿಸುತ್ತಾನೆ. ಎಲಿಜ ಸಾಮಾಜಿಕ ಸೇವೆಯಲ್ಲಿ ತೊಡಗುತ್ತಾಳೆ. "ಎಲ್ಲಿಯೋ ಹುಟ್ಟಿ, ಎಲ್ಲಿಯೋ ಬೆಳೆದ ಈ ವಿದೇಶಿಯ ಸತಿಪತಿಯರು ಭಾರತವನ್ನೇ ಸ್ವದೇಶವೆಂದು ಸ್ವೀಕರಿಸಿ, ಅದರ ಉತ್ಥಾನಕ್ಕಾಗಿ ನಾನಾ ರೀತಿಯಲ್ಲಿ ಅಭೂತಪೂರ್ವಸೇವೆ ಸಲ್ಲಿಸಿದ್ದನ್ನು ನೋಡಿದಾಗ ಜಗತ್ತೊಂದು ಮನೆ, ಅಲ್ಲಿರುವ ಜನರೆಲ್ಲರೂ ಸೋದರರು ಎಂಬ ಭಾವನೆ ಮೂಡದಿರಲಾರದು. ಇದೆಲ್ಲ ದೈವೇಚ್ಛೆ ಇದನ್ನು ಮೀರುವವರಾರು?

ಜನಸೇವೆಯೇ ಜೀವನಧರ್ಮವೆಂದು ತಿಳಿದು ನಿಷ್ಕಾಮ ಸೇವೆಸುತ್ತಿದ್ದಾರೆ"[೧] ಇವರಿಗೆ ಮೂವರು ಮಕ್ಕಳು ಒಬ್ಬ ಮಗ. ಇಬ್ಬರು ಹೆಣ್ಣುಮಕ್ಕಳು ಕೊನೆಯ ಮಗಳು ಲೂಸಿಯಾ ೧೮೭೨ರಲ್ಲಿ ಮರಣ ಹೊಂದಲಾಗಿ ಕಾಲ್ಡ್‌ವೆಲ್‌ಗೆ ಜಗತ್ತೆಶೂನ್ಯವಾಗುತ್ತದೆ. ದುಃಖ ಪರಿಹಾರಕ್ಕಾಗಿ ೧೮೭೩ರಲ್ಲಿ ಇಂಗ್ಲೆಂಡಿಗೋಗಿ ವ್ಯಾಕರಣವನ್ನು ಎರಡನೆಯ ಮುದ್ರಣಕ್ಕಾಗಿ ತಿದ್ದುತ್ತಾನೆ. ೧೮೭೫ರಲ್ಲಿ ಪರಿಷ್ಕೃತ ಮುದ್ರಣ ಹೊರಬರುತ್ತದೆ. ೧೮೭೫ರಲ್ಲಿ ಇಂಡಿಯಾಕ್ಕೆ ಮರಳುತ್ತಾನೆ. ಅವನ ಅಸದೃಶ ಸೇವೆ, ಜ್ಞಾನದಾಸೋಹವನ್ನು ಗುರುತಿಸಿ ಕ್ರಿಶ್ಚಿಯನ್ ವರಿಷ್ಠಮಂಡಲಿ ಅವನಿಗೆ ಬಿಷಪ್ ಪದವಿನೀಡುತ್ತದೆ. ಮದ್ರಾಸ್ ವಿಶ್ವವಿದ್ಯಾನಿಲಯ ಇಪ್ಪತ್ತೆರಡನೆಯ ಪದವಿ ಪ್ರಧಾನ ಸಮಾರಂಭದಲ್ಲಿ ಉಪದೇಶ ಭಾಷಣ ಮಾಡಿಸುವ ಮೂಲಕ ಗೌರವ ಸಲ್ಲಿಸುತ್ತದೆ. ಕೊಡೈಕೆನಾಲ್‌ನಲ್ಲಿ ಜಿಲ್ಲಾಧಿಕಾರಿಯ ನೆರವಿನಿಂದ ಚರ್ಚ್ ಕಟ್ಟಲು ನೆರವಾಗುತ್ತಾನೆ. ೧೮೮೩ರಲ್ಲಿ ಇಂಗ್ಲೆಂಡ್‌ಗೆ ತೆರಳಿ ೧೮೮೪ರಲ್ಲಿ ಮತ್ತೆ ಇಂಡಿಯಾಕ್ಕೆ ತೆರಳಿ ೧೮೮೬ರಲ್ಲಿ ಕೊಡೈಕೆನಾಲ್ ಚರ್ಚ್ ಪೂರ್ಣಗೊಳಿಸುತ್ತಾನೆ. ೧೮೯೧ರ ಅಕ್ಟೋಬರ್‌ನಲ್ಲಿ ನೆಗಡಿಕೆಮ್ಮು ಜ್ವರಗಳಿಂದಾಗಿ ಮರಣಹೊಂದುತ್ತಾನೆ. ಇಡಯಂಕುಡಿಗೊಯ್ದು ಚರ್ಚ್‌ನಲ್ಲಿಯೇ ಸಮಾಧಿ ಮಾಡಲಾಯಿತು.

ಈತನ ಸಾಧನೆಯನ್ನು ನೋಡಿದಾಗ ಮ್ಯಾಕ್ಸ್‌ಮುಲ್ಲರನ ನೆನಪು, ಕಿಟ್ಟೆಲ್ಲರ ನಿಘಂಟಿನ ಸೇವೆ ಇವರೆಲ್ಲರೂ ಪಾಶ್ಚಾತ್ಯರಾದರು. ಕನ್ನಡದ ಸೇವೆ ನೆನೆದಾಗ ಕನ್ನಡದ ನೆಲ, ಜನ, ಪರಿಸರ ಎಲ್ಲರಿಗೂ ಆದರ್ಶಪ್ರಿಯವಾಗಿದೆಯೆಂದು ತಿಳಿದುಬರುತ್ತದೆ.

**ನಟಸಾರ್ವಭೌಮನ ಪೀಕಲಾಟ:** ಈ ಕತೆಯು ಸಮಕಾಲೀನ ವ್ಯಕ್ತಿ ಸಂದರ್ಭಗಳನ್ನು ವಿವರಿಸುತ್ತಾ ಒಳ್ಳೆಯ ಕಥಾತಂತ್ರವೇ ಮೈಗೂಡಿ ಬಂದಿರುವ ಕಥೆ ಇಚಂತನ ಪರತೆ, ಸಹಜತೆ, ಸಂಕೀರ್ಣತ ಸೂಕ್ಷ್ಮ ಸ್ವರೂಪವನ್ನು ಅನುಭವಕ್ಕೆ ದಕ್ಕುವಂತೆ ಚಿತ್ರಿಸುವ ಕಥೆಗಾರಿಕೆ ಈ ಕಥೆಯಲ್ಲಿದೆ.

ವೆಂಕಟಪ್ಪ ಮಗ ಚಂದ್ರಕುಮಾರನೊಡನೆ ನಗರದ ಸುಪ್ರಸಿದ್ಧ ನಾಟಕ ಕಂಪೆನಿಯಲ್ಲಿ ಸೇರಿ, ಮಗನಿಗೂ ಬಾಲಪಾತ್ರಗಳನ್ನು ವಹಿಸಿ ಅವನ ಅಭಿನಯ ಕೌಶಲದಿಂದ ಜನಪ್ರಿಯತೆಗಳಿಸುತ್ತಾನೆ. ಚಲನ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡುತ್ತಾನೆ. ದಿನಕಳೆದಂತೆ ಚಂದ್ರಕುಮಾರನ ಕಲಾಪ್ರೌಢಿಮೆ ದೇಶದ ಮೂಲೆಮೂಲೆಗಳಲ್ಲಿ ಹರಡಿ ಹೆಸರು ಗಳಿಸುತ್ತಾನೆ. ತಾಯಿ–ತಂದೆಯವರು ನೋಡಿದ ಹುಡಿಗಿಯೊಂದಿಗೆ ಮದುವೆಯಾಗುತ್ತದೆ. ಮೃಡಾಣಿ ಸೂಕ್ಷ್ಮಮತಿ–

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಮಹಾಪಂಡಿತ ಕಾಲ್ಡ್‌ವೆಲ್‌ನ ಕಥೆ, ಪುಟ. ೨೧೯.

ಯಾಗಿದ್ದಳು. ಚಂದ್ರಕುಮಾರನ ಅಂಗಸೌಷ್ಟವಕ್ಕೆ, ದೇಹಕಾಂತಿಗೆ ಮಾರುಹೋಗದ ಅಪ್ಸರೆಯರುಂಟೇ ಮೃಡಾಣಿಗೂ ಗೊತ್ತು, ತನ್ನ ಗಂಡ ಯಾವ ಹೆಣ್ಣಿನ ಜತೆಯಲ್ಲಾದರೂ ಇರಲಿ, ಹಣ ಭದ್ರಪಡಿಸಿಕೊಳ್ಳುವುದೆಂದು ಯೋಚಿಸಿ, ಉಪಾಯದಿಂದ ತಿಜೋರಿ ಕೀಲಿ ಕೈಯನ್ನು ವಶಪಡಿಸಿಕೊಳ್ಳುತ್ತಾಳೆ.

**ಕಲೆಯ ಕೊಲೆ:** ಈ ಕತೆಯಾ ನರ್ತಕಿ ಉಮಾಭಾರತಿಯು ಕಲೆಗಾಗಿ ತನ್ನ ಪ್ರಾಣವನ್ನರ್ಪಿಸಿದ ಕತೆಯಾಗಿದೆ.

ಸಿದ್ದೇಗೌಡ – ಸುಶೀಲಳ ಮಗಳೆ ಉಮಾಭಾರತಿ. ಮಗಳು ಮಹಾನರ್ತಕಿಯನ್ನಾಗಿ ಬೆಳೆಸಬೇಕೆಂಬುದು ಅದರಂತೆ ರಂಗವೇದಿಕೆಯ ಮೇಲೆ ಮಿಂಚುತ್ತಾಳೆ. ತಜ್ಞರ ರಸಿಕರ ಮೆಚ್ಚುಗೆಯನ್ನು ಪಡೆಯುತ್ತಾಳೆ. ರಸಿಕನಲ್ಲದ ಗಂಡು ದೊರೆತದ್ದಾದರೆ ಮಗಳ ಕಲಾರಾಧಾನೆಗೆ ಅಡ್ಡಿಯುಂಟಾಗುತ್ತದೆ ಎಂದು ಪ್ರಧಾನಿಯವರು ಹೇಳಿದ ಮಾತು ನೆನಪಿಗೆ ಬರುತ್ತದೆ. ಉಮಾಭಾರತಿ ಇಪ್ಪತ್ತೆಂಟು ವಯಸ್ಸಿಗೆ ಕಾಲಿಟ್ಟನಂತರ ತಂದೆ–ತಾಯಿಯರಿಗೆ ಮಗಳ ಮದುವೆಯ ಚಿಂತೆ. ಅವಳ ಕಲಾಪ್ರೌಢಿಮೆಗೆ ತಕ್ಕ ವರ ಸಿಗುವುದುಂಟೇ?

ಇದೇ ಸಮಯಕ್ಕೆ ಸಿದ್ದೇಗೌಡರ ಸ್ನೇಹಿತ ತಿಮ್ಮಪ್ಪ ಬರುತ್ತಾನೆ. ಮಾತನಾಡುತ್ತಾ ಮಗಳ ಮದುವೆ ಪ್ರಸ್ತಾಪ ಬಂದಾಗ ತನ್ನ ಮಗ ನಾಗರಾಜ ಇಂಜನಿಯರಿಂಗ್ ಮುಗಿದಿದ್ದು ಲೋಕೋಪಯೋಗಿ ಇಲಾಖೆಯಲ್ಲಿ ವೃತ್ತಿಯಲ್ಲಿರುತ್ತಾನೆ. ತನ್ನ ಮಗನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿಕೊಟ್ಟರೆ ಸ್ನೇಹ ಶಾಶ್ವತವಾಗಿಯುಳಿಯುತ್ತದೆಂದು ಹೇಳುತ್ತಾನೆ. ಸಿದ್ದೇಗೌಡ ಕಲೆಯನ್ನು ಕುರಿತು 'ನರ್ತನ ಚಿತ್ತಾಹ್ಲಾದಕಾರಿಮಾತ್ರವಲ್ಲ, ಆತ್ಮೋದ್ಧಾರಕಾರಿಯೂ ಹೌದು; ಜನಮನರಂಜನ ಸಾಧನ ಮಾತ್ರವಲ್ಲ, ಭಗವತ್ಸೇವಾ ನಿಮಿತ್ತವೂ ಹೌದು. ಕಲಾರಾಧಕರಿಗೆ ಕಲಾರಾಧನೆಯೆ ಬದುಕು; ಅದು ತಪ್ಪಿದಾಗ ಅವರ ಬದುಕು ಅಸ್ತವ್ಯಸ್ತವಾಗುತ್ತದೆ"[೧] ಎಂಬ ಮಾತು ಅಕ್ಷರಶಃ ನಿಜ. ಈ ಮಾತೇ ಮುಂದೆ ಮಗಳ ಬದುಕಿಗೂ ಅನ್ವಯಿಸುತ್ತದೆ.

ಮದುವೆಯ ನಂತರ ಅವಳ ಕಲಾತಪಸ್ಸಿಗೆ ಅವಕಾಶಕೊಡಿ ರಂಗವೇದಿಕೆಯಲ್ಲಿ ಕಲಾವಿದನೊಬ್ಬ ಸ್ಪರ್ಶಿಸಬೇಕಾದ ಅನಿವಾರ್ಯ ಬಂದಾಗ ನಾಗರಾಜ ಅವಳ ಬಗ್ಗೆ ಶಂಕಿಸಬಾರದು. ನನ್ನ ಮಗಳು ಅಂತರಂಗದಲ್ಲಿ ಮಾತ್ರವಲ್ಲ, ಬಹಿರಂಗದಲ್ಲಿಯೂ ಪರಿಶುದ್ದೆ ಎಂದು ಮಗಳ ಬಗ್ಗೆ ಸಿದ್ದೇಗೌಡ

---

೧. ದೇಜಗೌ, ದೇವರ ಮಗು ಮತ್ತು ಇತರ ಕಥೆಗಳು : ಕಲೆಯ ಕೊಲೆ, ಪುಟ. ೨೪೦.

ಹೇಳುತ್ತಾನೆ. ಎರಡು ಮನೆತನಗಳೊಪ್ಪಿ ಮದುವೆಯನ್ನು ಅದ್ದೂರಿಯಿಂದ ಮಾಡಿ ಮುಗಿಸುತ್ತಾರೆ.

ಮದುವೆ ನಂತರ ಹೊಸ ಪರಿಸರದೊಂದಿಗೆ ಹೊಂದಿಕೊಳ್ಳುತ್ತಾಳೆ. ಕಲೆಯ ಗಂಧವೇ ಗೊತ್ತಿಲ್ಲದ ನಾಗರಾಜನಿಗೆ ಶಕ್ತಿಮೀರಿ ಕಲೆಯ ಕಡೆಗೆ ಎಳೆಯಲು ಪ್ರಯತ್ನಿಸುತ್ತಾಳೆ. ಕಲಾಶಾಲೆಗೆ ಹೋಗುವುದು ಇಷ್ಟವಿಲ್ಲ. ಮಾವನೊಪ್ಪಿಸಿ ಹೋಗುತ್ತಾಳೆ. ಪ್ರದರ್ಶನಕ್ಕೆ ಗಂಡನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾಳೆ. ಆಗಾಗ್ಗೆ ತಪ್ಪಿಸಿಕೊಳ್ಳುತ್ತಾನೆ. ಇವರಿಗೆ ಗಂಡುಮಗುವಾಗುತ್ತದೆ. ಮಗುವಿನ ಹೆಸರು ರಾಹುಲ. ಸಿದ್ದೇಗೌಡ ಬಂಗಲೆಯನ್ನು ಮಗಳಿಗೆ ಕಟ್ಟಿಸಿಕೊಡುತ್ತಾನೆ. ಅದೆ ಮನೆಯಲ್ಲಿ ಸಂಸಾರ ಹೂಡುತ್ತಾರೆ. ರಾಹುಲನನ್ನು ಸುಶೀಲಮ್ಮ ಸಿದ್ದೇಗೌಡರೆ ಮಗಳ ನೆನಪಾದಾಗ ಮೊಮ್ಮಗನನ್ನು ಅವನಲ್ಲಿ ಮಗಳನ್ನು ನೋಡಬಹುದೆಂದಿಟ್ಟುಕೊಳ್ಳುತ್ತಾರೆ.

ನಾಗರಾಜನ ನಡವಳಿಕೆಯಲ್ಲಿ ಬದಲಾಗುತ್ತದೆ. ಮಧ್ಯಪಾನ ಸೇವನೆ. ಮಧ್ಯ ರಾತ್ರಿಮನೆಗೆ ಬರುವುದು ಪ್ರಾತಃಕಾಲದಲ್ಲೆದ್ದು ಕೆಲಸಕ್ಕೆ ಹೊರಡುತ್ತಾನೆ. ವಿಷಯ ತಂದೆತಾಯಿಯರಿಗೆ ಗೊತ್ತಾಗದಂತೆ ಸಂಕಷ್ಟವನನ್ನುಭವಿಸುತ್ತಾಳೆ. ಅಳಿಯನ ಚಾಳಿ ಸಿದ್ದೇಗೌಡರಿಗೆ ಗೊತ್ತಾಗಿ ತನ್ನ ಮಗಳು ಆರ್ಥಿಕವಾಗಿ ತನ್ನ ಕಾಲ ಮೇಲೆ ನಿಲ್ಲಲಿ ಎಂದು ಇಪ್ಪತ್ತೆಕೆರೆ ತೋಟವನ್ನು ಮಗಳ ಹೆಸರಿಗೆ ಬರೆಯುತ್ತಾರೆ. ಹೃದಯ ಸಾಮರಸ್ಯವಿಲ್ಲದಿದ್ದರೆ ದಾಂಪತ್ಯ ನರಕವಾಗುತ್ತವೆ. ಹಾಗೆ ಉಮಾಭಾರತಿ ಜೀವನದಲ್ಲಿ ಹಾಗೆ ಆಗುತ್ತದೆ. ಪ್ರಧಾನಿ ಇಂದಿರಾಗಾಂಧಿ ಕರ್ನಾಟಕದ ರಾಜಧಾನಿಗೆ ಬಂದಾಗ ಗೌರವಾರ್ಥವಾಗಿ ಸರ್ಕಾರವೇರ್ಪಡಿಸಿ ಮನರಂಜನಾ ಕಾರ್ಯಕ್ರಮದಲ್ಲಿ ಕೃಷ್ಣರಾಸಲೀಲೆಯ ನೃತ್ಯರೂಪಕವಿತ್ತು. ಉಮಾಭಾರತಿಯೆ ರಾಧೆ. ಅವರ ಗುರುವೇ ಕೃಷ್ಣ. ಆ ಪ್ರದರ್ಶನಕ್ಕೆ ಸಿದ್ದೇಗೌಡ, ತಿಮ್ಮಪ್ಪ, ನಾಗರಾಜ ಕುಟುಂಬದವರೆಲ್ಲ ಬಂದಿರುತ್ತಾರೆ. ನರ್ತನ ಮೆಚ್ಚಿ ಮೆಚ್ಚುಗೆ ಚಪ್ಪಾಳೆಯ ಸುರಿಮಳೆಯಾಗುತ್ತದೆ. ಕಲಾವಿದರಿಗೆ ಚಪ್ಪಾಳೆಯ ಪ್ರೋತ್ಸಾಹಕ್ಕಿಂತ ಇನ್ನೇನುಬೇಕು. ಪ್ರಧಾನಿ ವೇದಿಕೆಗೇರಿ ಭಾರತಿಯನ್ನು ಕೊಂಡಾಡಿ ಗುಲಾಬಿಹಾರ ಹಾಕಿ ಚೆಕ್ಕನೀಡಿ ಆಲಂಗಿಸಿಕೊಳ್ಳುತ್ತಾರೆ. ನಾಗರಾಜ ಅಸೂಯಪರನಾಗುತ್ತಾನೆ. ಗಂಡನ ಮುಂದೆಯೇ ನಿಮ್ಮಿಬ್ಬರ ಚಕ್ಕಂದ ಪ್ರದರ್ಶನವೇನೆಂದು ರೇಗಾಡಿ ಬಾಯಿಗೆ ಬಂದಂತೆ ಹೇಳುತ್ತಾನೆ. ಭಗವಂತನ ಆರಾಧನೆಯೇ ಆ ರಾಸಲೀಲೆಯ ಉದ್ದೇಶ. ಕಲೆಯಲ್ಲಿ ಸ್ಪರ್ಶನ ಚುಂಬನ ಅನಿವಾರ್ಯ, ಅದರಿಂದ ಪಾತಿವ್ರತ್ಯಕ್ಕೆ ಭಂಗಬರುವುದಿಲ್ಲ. ಕಲೆಯ ಕೊಲೆಗೆ ಪ್ರಯತ್ನಿಸಬಾರದೆಂದು ಗೋಳಾಡುತ್ತಾಳೆ. ನಾನಿದ್ದು ಫಲವೇನು? ಅಪ್ಪನ ಗತಿಯೇನು? ಸರಸ್ವತಿಯ ಆರಾಧನೆ–

ಯನ್ನೆರವೇರಿಸಲಿಲ್ಲ. ಕಲಾ ಸರಸ್ವತಿಗೆ ತನ್ನಿಂದ ಅನ್ಯಾಯವಾಗಿದೆಯೆಂದು ಅಪ್ಪನ ಆಸೆ ಈಡೇರಿಸಲಿಲ್ಲವೆಂದು ಯಾರಿಗೂ ಹೇಳದ ಹಾಗೆ ಮನೆಬಿಟ್ಟು ಹೊರಟುಹೋಗುತ್ತಾಳೆ.

ಕಲಾರಾಧಕರಿಗೆ ತಮ್ಮ ಜೀವಕ್ಕಿಂತ ಕಲೆಯೇ ದೊಡ್ಡದೆಂದು ಭಾವಿಸಿರುತ್ತಾರೆಂಬುದಕ್ಕೆ ಉಮಾಭಾರತೀಯ ಜೀವನವೇ ಸಾಕ್ಷಿಯಾಗಿದೆ.

**ಜೀತ:** ಚೆನ್ನಂಗೆರೆಯ ಮಾದಯ್ಯ ಆರು ಮಕ್ಕಳ ತಂದೆ. ಅವನಿಗಿದ್ದ ಆಸ್ತಿಯೆಂದರೆ ಮೂರಂಕಣದ ಹೆಂಚಿನ ಮನೆ. ಒಂದೆ ಕರೆ ಹೊಲ. ಒಂದು ಜೊತೆ ಹಸು ಮತ್ತು ಐದಾರು ಕುರಿ. ಅವನ ಹೆಂಡತಿ ಈರಿ. ಮಳೆಬರದೆ ಬೆಳೆ ಹಾಳಾದಾಗ ಒಂದೊಂದು ಕುರಿಯನ್ನೆ ಮಾರಿ ಧಾನ್ಯಕೊಳ್ಳುತ್ತಾನೆ. ಕುರಿಗಳೆಲ್ಲ ಮರಾಟವಾದ ನಂತರ ಸಂಸಾರ ನಿರ್ವಹಣೆಗೆ ಬೇರಾವುದೂ ದಾರಿ ಇಲ್ಲದ್ದರಿಂದ ಊರಿನ ಶ್ರೀಮಂತರ ಮನೆಯಲ್ಲಿ ಜೀತಕ್ಕಿರುವುದೆಂದು ನಿರ್ಧರಿಸುತ್ತಾನೆ. ಶೇಕದಾರ ಮನೆತನಕ್ಕೆ ಸೇರಿದ ಪುಟ್ಟಪ್ಪ ದೊಡ್ಡ ಜಮೀನ್ದಾರನಾದ್ದರಿಂದ ಜೀತಗಾರರ ಅಗತ್ಯವಿರಬಹುದೆಂದು ತಿಳಿದು ಮಾದಯ್ಯ ವಿಚಾರಿಸುತ್ತಾನೆ. ಪುಟ್ಟಪ್ಪನ ಮನೆಯಿದ್ದದ್ದು ತೋಟದಲ್ಲಿ ಊರಾಚೆ. ಮಾದಯ್ಯ ಈಗಾಗಲೇ ನನ್ನ ಬಳಿ ಹೊಲ, ಗದ್ದೆ, ತೋಟದ ಕೆಲಸಕ್ಕೆ ದನಕರುಗಳ ಉಸ್ತುವಾರಿಗೆ ಹೆಚ್ಚಿಗೆ ಆಳುಗಳಿದ್ದಾರೆ. ಅವರಲ್ಲಿ ಒಬ್ಬಿಬ್ಬರನ್ನು ತೆಗೆಯಬೇಕೆಂದಿದ್ದೇನೆ. ಆದ್ದರಿಂದ ನಿನಗೆ ನನ್ನಲ್ಲಿ ಕೆಲಸವಿಲ್ಲ' ಎಂದು ಹೇಳಿದಾಗ ಮಾದಯ್ಯ 'ಮಳೆಬೆಳೆ ಇಲ್ಲದೆ ಸಂಸಾರ ಸಾಕುವುದೇ ಕಷ್ಟ. ನಾವು ಕೆಲಸ ಕೊಡ್ನಿಲ್ಲ, ಹೆಂಡ್ತಿ ಮಕ್ಕಳನ್ನೂ ಕಟ್ಕೊಂಡು ನೀರಿಗೆ ಬೀಳಬೇಕಾಗ್ತದೆ. ನನ್ಸಂಸಾರಕ್ಕೆ ನೀವೇ ಗತಿ' ಎಂದು ಹೇಳುತ್ತ ಮಾದಯ್ಯ ಕಾಲಿಗೆ ಬೀಳುತ್ತಾನೆ. 'ನೋಡು ಮಾದಯ್ಯ ಗಂಡಾಳು ಸಾಕಷ್ಟು ಜನ ಇದ್ದಾರೆ. ಮನೆಕೆಲಸಕ್ಕೆ ನನ್ನ ಮಗನ್ನ ನೋಡ್ಕೊಳ್ಳೋಕೆ ಹೆಣ್ಣಾಳು ಬೇಕಾಗಿದೆ. ನನ್ನ ಹೆಂಡತಿಗೂ ಆರೋಗ್ಯವಿಲ್ಲ. ಜತೆಗೆ ಇಷ್ಟರಲ್ಲೇ ಹೆರಿಗೆ ಆಗ್ತದೆ. ಹೇಗೂ ನಿನ್ನ ಮಗಳನ್ನೆ ಕಳಿಸು, ಎಂದಾಗ ಮಾದಯ್ಯನಿಗೆ ಮೂವರು ಹೆಣ್ಣುಮಕ್ಕಳು. ಮೂಗಿ ಒಬ್ಬಳು. ಹೆಸರು ಕೆಂಪಿ, ಹೆಸರಿಗೆ ತಕ್ಕಂತೆ ಚೆಲುವೆ, ದುಡಿದು ದುಡಿದು ಅವಳ ಶರೀರ ಕೃಶವಾಗಿದ್ದರೂ, ಅವಳ ಚೆಲುವಿಗೆ ಕುಂದು ತಗಲಲಿಲ್ಲ. ಇತರರು ಮಾತಾಡಿದ್ದೆಲ್ಲ ಅವಳಿಗೆ ಅರ್ಥವಾಗುತ್ತದೆ. ಅವಳ ಸನ್ನೆಗಳ ಭಾಷೆ ಮನೆಯವರಿಗೆ ಮತ್ತು ಹತ್ತಿರದವರಿಗೆ ಅರ್ಥವಾಗುತ್ತದೆ. ಅವಳ ಗ್ರಹಣ ಶಕ್ತಿ ಚುರುಕಾಗಿದೆ. ಮಾದಯ್ಯ ಅವಳು ಯಾರ್ಮನೇಲೂ ಇರೋಕೆ ಅವಳೊಪ್ಪೋಲ್ಲ ಎಂದಾಗ ಬೆಳಿಗ್ಗೆ ಬಂದು ಸಂಜೆ ಮೇಲೆ ಮನೆಗೆ ಹೋದರಾಯ್ತು ಎಂದು ಹೇಳಿದಾಗ ಮಾದಯ್ಯ ವಿಚಾರಿಸಿ ಹೇಳುತ್ತೇನೆಂದು ಹೇಳುತ್ತಾನೆ. ಮಾದಯ್ಯನ ಹೆಂಡತಿ ಈರಿ

"ಹಣವಂತರ ಮನೇಲಿ ನನ್ಮಗಳ ಮಾನ ಉಳೀತದೆಯೊ ಅವರು ಕೆಟ್ಟವರು"[೧] ಎಂದು ವಿರೋಧ ವ್ಯಕ್ತಿಪಡಿಸುತ್ತಾಳೆ. ತಂದೆಯ ಗೋಳನ್ನು ಸಹಿಸಲಾರದೆ ಕೆಂಪಿ ಒಪ್ಪಿಕೊಳ್ಳುತ್ತಾಳೆ. (ಇಲ್ಲಿ ಶ್ರೀಮಂತರು ಬಡವರ ಹೆಣ್ಣು ಮಕ್ಕಳನ್ನು ಅವರು ಏನು ಮಾಡುವುದಕ್ಕೆ ಹೇಸುವುದಿಲ್ಲವೆಂದು ಈರಿ ಹೇಳುತ್ತಾಳೆ). ಪುಟ್ಟಪ್ಪಗೌಡ ಆಯುರ್ವೇದ ಪಂಡಿತನೆಂದು, ಶಿಕಾರಿಕಾರನೆಂದು ಪ್ರಸಿದ್ಧಿ. ಆಸ್ಪತ್ರೆಯ ಉಸ್ತುವಾರಿ ನೋಡಿಕೊಳ್ಳಲು ಮದ್ದು ಗಿಡಗಳನ್ನು ಬೆಳೆಯಲು ಲೆಕ್ಕಪತ್ರಗಳನ್ನಿಡಲು ಶೇಷಪ್ಪ ಎಂಬುವವನನ್ನು ನೇಮಿಸಿಕೊಳ್ಳುತ್ತಾರೆ. ಗೆಳೆಯನೂ ಹೌದು. ಕೆಂಪಿಯ ರೂಪವನ್ನು ನಾನಾ ಬಗೆಯಲ್ಲಿ ಯಜಮಾನನ ಬಾಯಲ್ಲಿ ಜೊಲ್ಲು ಸುರಿಯುವಂತೆ ಬಣ್ಣಿಸಿದವನೂ ಅವನೆ. ಜೀತಕ್ಕಿಟ್ಟುಕೊಂಡ ಪುಟ್ಟಪ್ಪಗೌಡ ಅವಳ ಸೌಂದರ್ಯವನ್ನು ನೋಡಿ ಅವಳಿಂದ ಸುಖಪಡಬೇಕೆಂಬ ಆಸೆಯಿಂದ ಇರುತ್ತಾನೆ. ಕೆಂಪಿ ಮೂಗಿಯಾದರೂ ಅದಕ್ಕೆ ಅವಕಾಶ ಮಾಡಿಕೊಡುವುದಿಲ್ಲ. ಪುಟ್ಟಪ್ಪಗೌಡನ ಹೆಂಡತಿ ತಿಮ್ಮಮ್ಮ, ಇಬ್ಬರು ಮಕ್ಕಳು ಒಂದು ಗಂಡು, ಒಂದು ಹೆಣ್ಣು. ಗಂಡು ಅಂಗವಿಕಲ. ಕೈಕಾಲು ಬೆರಳು ಸೊಟ್ಟು. ಕಣ್ಣುಮಾಲು. ಮಾತು ತೊದಲು. ಹೆಣ್ಣು ಪೆದ್ದಿ. ಮಾತಿನಲ್ಲಿ ಹೊಂದಾಣಿಕೆಯಿಲ್ಲ. ಮಕ್ಕಳ ಅಂಗವಿಕಲತೆಗೆ ಪುಟ್ಟಪ್ಪನ ಪಾಪವೇ ಕಾರಣವೆಂದು ಶಪಿಸುವುದುಂಟು. ಇಲ್ಲಿ ಒಂದಂಶ ನೆನಪಿಗೆ ಬರುತ್ತದೆ. ತಂದೆ-ತಾಯಿಯರು ಮಾಡಿದ್ದು ಮಕ್ಕಳಿಗೆ ಅನ್ನೊ ಹಾಗೆ. ಕೆಂಪಿ ರಾತ್ರಿ ಕಾಲವೂ ತೋಟದ ಮನೆಯಲ್ಲಿದ್ದುಕೊಂಡೆ, ಮಕ್ಕಳನ್ನು ನೋಡಿಕೊಳ್ಳಬೇಕಾಗುತ್ತದೆಂದು ಮಾದಯ್ಯ ವಿಧಿಯಿಲ್ಲದೆ ಒಪ್ಪಿಕೊಳ್ಳುವನು. ಕಣ್ಣಿಟ್ಟಿನಲ್ಲಿರುವ ತನಕ ಅಪ್ಪ ತಿರುಗಿಕೊಂಡು, ನೋಡುತ್ತಾನೆ; ಮಗಳು ಅಶ್ರುಲೋಚನೆಯಾಗಿ ಅಪ್ಪನನ್ನು ನೋಡುತ್ತಾಳೆ. "ದುಡಿಮೆಗೆ ತಕ್ಕ ಫಲ ದೊರೆಯುವುದಿದ್ದರೆ ಹಣವಂತಿಕೆಯ ಬೇಡ; ಬಡತನವೇ ಲೇಸು, ಗುಲಾಮ ಚಾಕರಿಯಲ್ಲಿರುವುದರ ಬದಲು ಆತ್ಮಹತ್ಯೆಯೇ ಮೇಲು"[೨] ಎಂದು ಪುಟ್ಟಪ್ಪ ಗುಡಿಸಲು ಸೇರುತ್ತಾನೆ. ೧. ಹಣವಿದ್ದರೆ ಮನುಷ್ಯನು ಏನೆಲ್ಲ ಮಾಡುತ್ತದೆಂಬುದು ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದೇ ಇರುವುದು. ೨. ಇನ್ನೊಬ್ಬರ ಕೈಕೆಳಗೆ ಜೀತಾದಾಳಾಗುವ ಬದಲು ಆತ್ಮಹತ್ಯೆಯೇ ಸರಿ ಎಂದು ಪುಟ್ಟಪ್ಪ ಆಲೋಚಿಸಿಕೊಳ್ಳುತ್ತಾನೆ. ೩. "ಹೆಣ್ಣು ಒಲಿದರೆ ನಾರಿ, ಮುನಿದರೆ ಮಾರಿ" ಎಂಬ ಮಾತು ಇಲ್ಲಿ ನೆನಪಿಗೆ ಬರುತ್ತದೆ. "ಹೆಣ್ಣಾಗಿ ತಾನಾಗಿ ಒಲಿದು ಬಂದರೆ ಮಾತ್ರ ಸ್ವರ್ಗ ಸುಖ, ಇಲ್ಲವಾದರೆ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಜೀತ', ತಳಗವಾದಿ ಪ್ರಕಾಶನ, ೨೦೦೫, ಪುಟ. ೨.

೨. ಅದೇ, ಪುಟ. ೫.

ನರಕಯಾತನೆ[೧] ಎಂಬ ಸಂಗತಿ ಅವನಿಗೆ ಸ್ಪಷ್ಟ. ಸ್ನಾನಮಾಡುವಾಗ ಅವನು ಕೆಂಪಿಯ ಮೈಮೇಲೆ ಕೈಯಾಡಿಸುತ್ತಾನೆ. ಆಗವಳು ರುದ್ರಿಯಂತೆ ಕಾಣಿಸಿಕೊಳ್ಳುತ್ತಾಳೆ. ತಾತ್ಸಾರ ತಿರಸ್ಕಾರಗಳು ಅವಳ ಅಂಗಾಂಗಗಳಲ್ಲಿ ಪ್ರತಿಫಲನಗೊಳ್ಳುತ್ತವೆ. ಪುರುಷ ಎಂಥ ಶ್ರೀಮಂತನಾಗಲಿ, ಸುಂದರನಾಗಲಿ, ಪ್ರತಿಷ್ಠಿತನಾಗಲಿ ಹೆಣ್ಣು ಅವನ ಬಲೆಗೆ ಬೀಳುವುದಿಲ್ಲವೆನ್ನುವುದಕ್ಕೆ ಕೆಂಪಿ ಸಾಕ್ಷಿಯಾಗಿದ್ದಾಳೆ.

ಕೆಂಪನೂ ಪುಟ್ಟಪ್ಪನತ್ತಿರ ಕೆಲಸಕ್ಕಿರುತ್ತಾನೆ. ಕೆಂಪನಿಗೆ ಕೆಂಪಿಯು ಮೂಗಿಯೆಂದೋ ಏನೋ ಅವನಿಗೆ ಅವಳ ಬಗ್ಗೆ ಅನುಕಂಪ, ಕೆಂಪನ ನಡೆವಳಿ ಅವಳಿಗೆ ಹಿಡಿಸಿದ್ದರಿಂದ ಅವನ ಕೆಲಸದಲ್ಲಿ ಆಗಾಗ್ಗೆ ನೆರವಾಗುತ್ತಾಳೆ. "ದುಡಿಯುವವನಿಗೆ ದೃಢ ಕಾಯವೊಂದೆ ಆಸ್ತಿಯೆಂದವಳು ಯೋಚಿಸುತ್ತಾಳೆ"[೨] ದೇಜಗೌ ಇಲ್ಲಿ ದುಡಿಮೆಯ ಮಹತ್ವವನ್ನು ನೋಡಬಹುದು. ಕೆಂಪಿಯ ಪೂರ್ವೋತ್ತರಗಳನ್ನು ಅವರಿವರಿಂದ ವಿಚಾರಿಸಿಕೊಂಡಾಗ, ಅವಳ ಮುಗ್ಧತೆಯ ಬಗ್ಗೆ ರೂಪವಂತಿಕೆಯ ಬಗ್ಗೆ ಶೀಲದ ಬಗ್ಗೆ ಅಚ್ಚರಿಗೊಳ್ಳುತ್ತಾನೆ. ಆ ಸಮಾನ ಧರ್ಮಿಗಳ ಹೃದಯಗಳು ಬರಬರುತ್ತ ಹತ್ತಿರವಾಗುತ್ತವೆ. ಶ್ರೀಮಂತನ ಸಂಗಕ್ಕಿಂತ ಬಡವನ ಪ್ರೇಮವೇ ಕ್ಷೇಮಕಾರಕವೆಂದು ತಿಳಿಯುತ್ತಾಳೆ.

ತಿಮ್ಮಮ್ಮ ಗಂಡನ ಬಗೆಗಿನ ಅನುಮಾನದಿಂದ ಕೆಂಪಿಯನ್ನು ಮನೆಯಿಂದ ಹೊರಹಾಕಲು ಏನೇನೋ ಪ್ರಯತ್ನಿಸಿ ಸಾಧ್ಯವಾಗದೆ ಮುದ್ದೆಯಲ್ಲಿ ವಿಷಹಾಕಿ ಸಾಯಿಸಲು ಪ್ರಯತ್ನಿಸುತ್ತಾಳೆ. ತಿಂದೊಂದು ಗಂಟೆಯೊಳಗಾಗಿ ಕೆಂಪಿ ವಾಂತಿಭೇದಿಯಿಂದ ಕುಸಿದು ಕಂಗಲಾಗುತ್ತಾಳೆ. ತಂದೆ-ತಾಯಿಯರಿಗೆ ಸುದ್ಧಿ ತಲುಪುತ್ತದೆ. ಮಗಳನ್ನು ನೋಡಿ 'ಮಗಳೇ ನಿನ್ನನ್ನು ಸಾಕಲಾರದೆ ಜೀತಕ್ಕಿಟ್ಟ ಪಾಪಿಗಳು ನಾವು. ಯಾವ ಪಾಪಿ ನಿನಗೆ ವಿಷಕೊಟ್ಟಳೊ ಅವಳಿಗೆ ಎಲ್ಲ ರೋಗಗಳು ತಗುಲಲಿ' ಎಂದು ಹಲುಬುತ್ತಾರೆ. ಮಗಳನ್ನು ಗಾಡಿಯಲ್ಲಿ ಮಲಗಿಸಿಕೊಂಡು ಕರೆದೊಯ್ಯುತ್ತಾರೆ. ಇಲ್ಲಿ ಹೆಣ್ಣಿಗೆ ಹೆಣ್ಣೆ ಶತ್ರು ಎಂಬ ಮಾತು ಖಚಿತವಾಗುತ್ತದೆ.

ವಾರಾಂತ್ಯದಲ್ಲಿ ಕೆಂಪಿ ಪುಟ್ಟಪ್ಪಗೌಡನ ತೋಟದ ಮನೆಗೆ ವಾಪಸಾಗುತ್ತಾಳೆ. ಹಿಂದಿನಂತೆ ಮಕ್ಕಳನ್ನಾಡಿಸಬೇಕಾಗಿಲ್ಲವೆಂದು ತಿಮ್ಮಮ್ಮ ತಾಕೀತು ಮಾಡುತ್ತಾಳೆ. ಎಂಟು ತಿಂಗಳ ಕೊನೆಯಲ್ಲಿ ಅವಳ ಗರ್ಭದಿಂದ ಮಗು ಸತ್ತು ಹುಟ್ಟುತ್ತದೆ.

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಜೀತ', ತಳಗವಾದಿ ಪ್ರಕಾಶನ, ೨೦೦೫, ಪುಟ. ೭.

೨. ಅದೇ, ಪುಟ. ೭.

ಇಷ್ಟಾದರೂ ಗಂಡ ಹೆಂಡಿರ ದೋಷ ದೌರ್ಬಲ್ಯಗಳಿಗೆ ಕೊನೆಯಿಲ್ಲ. ಅಷ್ಟಕ್ಕೆಲ್ಲ ಶ್ರೀಮಂತಿಕೆಯ ಅಟ್ಟಹಾಸವೇ ಕಾರಣ. ಈ ಶ್ರೀಮಂತಿಕೆ ಎನ್ನುವುದು ಮನುಷ್ಯನ ಕೈಯಲ್ಲಿ ಏನೆಲ್ಲ ಮಾಡಿಸುತ್ತದೆಂಬುದನ್ನು ಕಾಣಬಹುದು. ಇದಕ್ಕೆ ಉದಾಹರಣೆಗೆ 'ಯಜಮಾನರಿಗೆ ನಿನ್ನಲ್ಲೊಂದು ಮಗು ಹುಟ್ಟುವುದಾದರೆ, ಅರ್ಧ ಆಸ್ತಿ ಬರೆಯುತ್ತಾರೆ' ಎಂದು ಶೇಷಪ್ಪ ಕೆಂಪಿಯನ್ನು ಮರಳು ಮಾಡಲು ಪ್ರಯತ್ನಿಸುತ್ತಾನೆ, "ಆಸ್ತಿಯಿಲ್ಲದೆ ಹುಟ್ಟಿದವಳಿಗೆ ಆಸ್ತಿಯೇಕೆ? ಆಸ್ತಿ ಬಲ ಬೇಡ, ಆಸ್ತಿ ಬಲವೇ ಸಾಕು"[೧] ಎಂದು ಕೆಂಪನನ್ನು ನೆನೆಯುತ್ತ ಮನಸ್ಸಿನಲ್ಲಿಯೇ ಯಜಮಾನನ್ನು ಶಪಿಸುವುದು. ಪ್ರತಿಯೊಂದು ಹೆಣ್ಣು ತನ್ನ ಗಂಡನು ಶಕ್ತಿಯುತನಾಗಿ ಇರಬೇಕೆಂದು ಆಶಿಸುತ್ತಾಳೆಯೇ ಹೊರತು ಶ್ರೀಮಂತಿಕೆಗೆ ಆಕೆ ಎಂದಿಗೂ ಮನಸೋಲುವುದಿಲ್ಲ. ಆ ಮನೆಯಲ್ಲಿದ್ದರೆ, ತಮ್ಮಿಬ್ಬರಿಗೂ ಸಾವು ತಪ್ಪದೆಂದು ಒಂದು ದಿನ ನಿಶ್ಚಯಿಸಿಕೊಂಡು, ರಾತ್ರಾರಾತ್ರಿ ಧಾರಾಕಾರವಾಗಿ ಬರುವ ಮಳೆಯಲ್ಲಿಯೇ ಈರಿ, ಮಾದಯ್ಯನ ಆಶೀರ್ವಾದ ಪಡೆದುಕೊಂಡು ಕೆಂಪಕೆಂಪಿಯರು ಹೊರಡುತ್ತಾರೆ. ಈರಿ ಮಾದಯ್ಯ ಮಗಳನ್ನು ಬಿಟ್ಟಿರಲಾರದೆ ಅವರೊಂದಿಗೆ ಬೆಂಗಳೂರಿಗೆ ತಲುಪಿ ಜೀತದಿಂದ, ಕಟುಕರ ಕೈಯಿಂದ ಬಚಾವಾದೆವೆಂದು ಹಿಗ್ಗುತ್ತಾರೆ "ಸ್ವಾತಂತ್ರ್ಯವಿರೆ ಬಡತನವೇ ಲೇಸು; ಇಲ್ಲದಿರೆ ಹಣವಂತಿಕೆಯೂ ಹೇಸು"[೨] ಎಂದು ತಿಳಿಯುತ್ತಾರೆ.

ಪುಟ್ಟಪ್ಪನಿಗೆ ಅನೇಕ ರೋಗಗಳು ಕಾಡುತ್ತವೆ. ಮನೆಯ ಆಡಳಿತವನ್ನು ಶೇಷಪ್ಪನಿಗೊಪ್ಪಿಸುತ್ತಾನೆ. ಪುಟ್ಟಪ್ಪನ ಅಂಗವಿಕಲ ಮಗ ನ್ಯೂಮೋನಿಯಾ ರೋಗದಿಂದ ನರಳಿ ಸಾಯುತ್ತಾನೆ. ತಿಮ್ಮಮ್ಮನೂ ಹಾಸುಗೆ ಹಿಡಿಯುತ್ತಾಳೆ. "ಪ್ರತಿಯೊಬ್ಬರೂ ತಾನು ಮಾಡಿದ ಕರ್ಮವನ್ನು ಅನುಭವಿಸಬೇಕಷ್ಟೇ"[೩] ಅಂದರೆ ನಾವು ಮಾವು ಬಿತ್ತರೆ ಮಾವು ಬೇವು ಬಿತ್ತರೆ ಬೇವನ್ನೆ ಅನುಭವಿಸಬೇಕೆಂಬುದು ತಿಳಿದುಬರುತ್ತದೆ. ಜೀವನದಲ್ಲಿ ಕೆಟ್ಟ ಕೆಲಸ ಮಾಡಿದ ವ್ಯಕ್ತಿಗಳಿಗೆ ಅಂತ್ಯದಲ್ಲಿ ಕೆಟ್ಟದ್ದೇ ಆಗುತ್ತದೆಂಬ ನಂಬಿಕೆ ಇದೆ. ಹಾಗೆಯೇ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಆಗೇ ಆಗುತ್ತದೆ. ಫಲಾಫಲಗಳನ್ನೆಲ್ಲ ಅನುಭವಿಸಲೇಬೇಕು ಎಂಬುದನ್ನು ಗ್ರಾಮೀಣ ನೆಲೆಯಿಂದ ಬಂದ ದೇಜಗೌ ಅವರು ಜಾನಪದ ವಿದ್ವಾಂಸರೂ ಆಗಿರುವುದರಿಂದ ಜಾನಪದದ ಸೂಕ್ಷ್ಮಗಳನ್ನು ಅಶಯಗಳನ್ನು ತಮ್ಮ ಕತೆಯಲ್ಲಿ ಬಳಸಿಕೊಂಡಿರುತ್ತಾನೆ.

**ವಿಶ್ವಾಸದ್ರೋಹಿ:** ಕಿಟ್ಟ ಅಷ್ಟೇನೂ ಅನುಕೂಲಸ್ಥರಲ್ಲದ ತಂದೆ–ತಾಯಿಯ ಮೂರನೆಯ ಮಗ, ಬೆಳೆಯುವ ಪೈರು ಮೊಳಕೆಯಲ್ಲಿ ಎನ್ನುವ ಹಾಗೆ. 'ಗಿಡವಾಗಿ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಜೀತ', ತಳಗವಾದಿ ಪ್ರಕಾಶನ, ೨೦೦೫, ಪುಟ. ೧೦.

೨. ಅದೇ, ಪುಟ. ೧೧.

೩. ಅದೇ, ಪುಟ. ೧೧.

ಬಗ್ಗದ್ದು ಮರವಾಗಿ ಬಗ್ಗಿತೆ' ಎಂಬಂತೆ ಕಿಟ್ಟ ಚಿಕ್ಕ ವಯಸ್ಸಿನಲ್ಲಿಯೇ ಶಾಲೆಯಲ್ಲಿ ಶ್ರೀಮಂತರ ಮಕ್ಕಳ ಸೀಸದ ಕಡ್ಡಿ ಬಳಪ ಮೊದಲಾದವನ್ನು ಕದಿಯುತ್ತಾನೆ. ಕದ್ದು ಬೀಡಿ ಸೇದುವುದನ್ನು ಕಲಿಯುತ್ತಾನೆ. ಬೀಡಿಗೆ ಕಾಸು ಬೇಕಿರುವುದರಿಂದ ಅವರಿವರ ತೋಟಗಳಲ್ಲಿ ಕದ್ದ ತರಕಾರಿಯನ್ನು ಮಾರುತ್ತಾನೆ. ಮಗ ಡಿಗ್ರಿಯನ್ನು ಪಡೆಯುವ ತನಕ ಹೇಗಾದರೂ ಓದಿಸಬೇಕೆಂದು ಹಂಬಲಿಸುತ್ತಾರೆ. ಕಿಟ್ಟನ ಸೋದರ ಮಾವ ಜವನೇಗೌಡ ಸಹಕಾರದಿಂದ ಎಸ್.ಎಸ್.ಎಲ್.ಸಿ. ಮುಗಿಸುತ್ತಾನೆ. ಪರೀಕ್ಷಾ ಮಂಡಳಿಯ ಅಧ್ಯಕ್ಷನಾಗಿರುವುದರಿಂದ ಬಿ.ಕಾಮ್ ಪರೀಕ್ಷೆ ಪ್ರಶ್ನೆಪತ್ರಿಕೆಗಳನ್ನೆಲ್ಲ ಮುದ್ರಿಸುವ ಕಾರ್ಯ ಅವನಿಗೆ ಸೇರಿರುತ್ತದೆ. ಆ ಪ್ರಶ್ನೆ ಪತ್ರಿಕೆ ತಂದು ಕಿಟ್ಟನ ಕೈಲಿ ಉತ್ತರ ಬರೆದುಕೊಡುವಂತಹದ್ದು. ಅವನು ಬಿ.ಕಾಮ್ ಪದವೀಧರನಾಗುತ್ತಾನೆ. ಅವನ ತಲೆಯಲ್ಲಿ ಮೋಸವಿದ್ಯೆ ತುಂಬಿಕೊಂಡಿತ್ತೆ ಹೊರತು, ವಾಣಿಜ್ಯ ವಿದ್ಯೆಯಲ್ಲಿ ಕಳ್ಳತನ ವಿದ್ಯೆ ಅವನಿಗೆ ಗೊತ್ತು ಹುಡುಗಿಯನ್ನು ಚುಡಾಯಿಸುವುದು. ಈ ವಿಷಯ ತಂದೆತಾಯಿಯರಿಗೆ ತಿಳಿಯಿತು. "ನೀನು ಹುಟ್ಟದಿದ್ದರೆ ಚೆನ್ನಾಗಿತ್ತಲ್ಲೋ, ಕತ್ತೆಗಾದಂತೆ ನಿನಗೆ ವಯಸ್ಸಾಗಿದೆ, ಸಂಪಾದ್ನೆ ಮಾಡಿ, ಮದುವೆ ಮಾಡ್ಕೊಂಡು ಇರ್ಬಾರ್ದೆ' ಎಂದು ಹೇಳಿದಾಗ "ನಾನು ಹುಟ್ಬೇಕು ಅಂತಿದ್ನೆ, ನೀವೆ ಹುಟ್ಟಿಸಿದಿರಿ"[೧] ಎಂದು ಕಿಟ್ಟ ಎದುರುತ್ತರ ನೀಡುತ್ತಾನೆ. ಮಗ ಕೆಡಲು ತಂದೆ-ತಾಯಿಯರೇ ಕಾರಣ ಎಂದು ಸೂಕ್ಷ್ಮವಾಗಿ ಕತೆಯಲ್ಲಿ ನಿರೂಪಿಸಲಾಗಿದೆ.

ದೇವಗೆರೆ ನಗರದಲ್ಲಿ ದೀನದಲಿತ ವಿದ್ಯಾಪೀಠದ ಅಧ್ಯಕ್ಷ ರಾಮಯ್ಯ ಅವರನ್ನು ಜವರೇಗೌಡ ಭೇಟಿಮಾಡಿ ಸೋದರಳಿಯನಿಗೊಂದು ಕೆಲಸಕೊಡುವಂತೆ ಅಂಗಲಾಚುತ್ತಾನೆ. ಮನುಷ್ಯ ನಡೆಯುವಾಗ ಏಳುಬೀಳು ಸಾಮಾನ್ಯ ಎನ್ನುವಂತೆ ಕಿಟ್ಟನ ಚಾಲು ಗೊತ್ತಿದ್ದರೂ, ಮಾನವೀಯ ಅನುಕಂಪೆಯಿಂದ ಅವನನ್ನು ಸರಿಯಾಗಿ ತಿದ್ದಿದ್ದಾದರೆ ಸರಿಹೋಗಬಹುದೆಂದು ಯೋಚಿಸಿ, ಒಪ್ಪುತ್ತಾರೆ. ಕಚೇರಿಯ ಕೆಲಸಗಳನ್ನೇನೋ ಪರಿಚಯಿಸಿಕೊಡುತ್ತಾರೆ. ತಮ್ಮ ಬಳಿಗೆ ಬಂದ ಜನರನ್ನು ವಿಚಿಕಿತ್ಸಕ ದೃಷ್ಟಿಯಿಂದ ಪರೀಕ್ಷಿಸದೆ ಸಂಪೂರ್ಣವಾಗಿ ನಂಬಿರುವ ದೌರ್ಬಲ್ಯ ಅವರದು. ಈ ದೌರ್ಬಲ್ಯ ಕಿಟ್ಟಿಗೆ ಗೊತ್ತಾಗಿ ಅದರ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತಾನೆ.

ಬೆಂಗಳೂರಿನ ಕಮಲಮ್ಮನ ಪತ್ರ ರಾಮಯ್ಯನ ಕೈಸೇರುತ್ತದೆ. ಬಿ.ಕಾಮ್ ಪ್ರಶ್ನೆ ಪತ್ರಿಕೆಗೆ ಮುನ್ನೂರು ರೂಪಾಯಿ ಕೊಟ್ಟಿದ್ದೀನಿ. ಮದುವೆಯಾಗುವಂತೆ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ವಿಶ್ವಾಸದ್ರೋಹ', ತಳಗವಾದಿ ಪ್ರಕಾಶನ, ೨೦೦೫, ಪುಟ. ೧೪.

ಬರೆದಿದ್ದೀಯೇ ನಿನ್ನಂತ ಲಫಂಗನನ್ನು ವಿದ್ಯಾವಿಹೀನನನ್ನು, ಮೋಸಗಾರರನ್ನು ಕಟ್ಟಿಕೊಂಡದ್ದಾದರೆ ನನ್ನ ಜೀವನ ನರಕವಾಗುತ್ತದೆ. ಜೋಕೆ, ಮತ್ತೊಮ್ಮೆ ಎತ್ತಿದರೆ ನಿನ್ನ ಮತ್ತು ನಿನ್ನಿ ಸೋದರ ಮಾವನ ಕತೆಯನ್ನೆಲ್ಲ ಸಾರ್ವಜನಿಕವಾಗಿ ಜಾಲಾಡಿಸುತ್ತೇನೆ. ನಿಮ್ಮ ಮಾವನಿಗೂ ತಿಳಿಸುತ್ತೇನೆ ಎಂದು ಬರೆದಿತ್ತು. ಈ ಪತ್ರ ಜವನೇಗೌಡರಿಗೂ ತಲುಪುತ್ತದೆ. ರಾಮಯ್ಯ ಕಿಟ್ಟನನ್ನು ತರಾಟೆಗೆ ತೆಗೆದುಕೊಂಡು ನಾಲ್ಕಾರು ಏಟು ಬಾರಿಸುತ್ತಾರೆ. ಇದೊಂದು ಸಾರಿ ಕ್ಷಮಿಸಿ, ನಿಮ್ಮಿಂದಲೇ ಮೆಚ್ಚುಗೆ ಬರುವಂತೆ ಕೆಲಸಮಾಡುತ್ತೇನೆಂದು ಹೇಳುತ್ತಾನೆ. ಕುವೆಂಪುರವರು ಹೇಳಿರುವ ಹಾಗೆ ಪಾಪಿಗೂ ಉದ್ಧಾರವಿಹುದು ಎನ್ನುವಂತೆ "ಭಗವಂತನ ಸೃಷ್ಟಿಯಲ್ಲಿ ಪಾಪಿಗೂ ಉದ್ಧಾರ ಇದೆಯಲ್ಲವೆ?"[೧] ಎಂದು ಯೋಚಿಸಿ ನಾನು ಈ ರೀತಿ ವರ್ತಿಸದಂತೆ ನಿನ್ನ ನಡತೆಯನ್ನು ತಿದ್ದಿಕೊಳ್ಳಲು. ತಿದ್ದಿಕೊಳ್ತೀನಿ ಅಂತ ಭಾಷೆ ಕೊಡಯ್ಯ ಎಂದು ಕಿಟ್ಟನೂ ಅಳುತ್ತಳತ್ತಲೆ ಭಾಷೆ ಕೊಡುತ್ತಾನೆ. ಇಲ್ಲಿ ಯಜಮಾನರ ಹಿರಿಯರಾದವರ ಕ್ಷಮಾಗುಣ ಹಾಗೂ ಅದರ ದುರುಪಯೋಗಗಳು ಇಲ್ಲಿ ವ್ಯಕ್ತವಾಗಿದೆ.

ಚೌಡಯ್ಯ ಕಿಟ್ಟನ ಹೆಂಡತಿ ಪೋಲೀಸ್ ಪೇದೆಯಾಗಿರುತ್ತಾಳೆ. ಒಂದು ಸಂಸ್ಥೆಯನ್ನು ಕಟ್ಟಿ ಬೆಳೆಸಿದ ವ್ಯಕ್ತಿ ಹಲವು ಜನ ಮಾಡಿದ ಮೋಸದಿಂದ ಚಿಂತೆಗೊಳಗಾಗುತ್ತಾನೆ. ಕೊನೆಗೆ ಖಾಯಿಲೆಯಿಂದ ಬಳಲುತ್ತಾನೆ. ಆಗ ಅವನಿಗೆ ಮೋಸ ಮಾಡಿದ ವ್ಯಕ್ತಿಗಳು ಹರ್ಷಪಡುತ್ತಾರೆಂಬಂತೆ ಕತೆಯ ಅಂತ್ಯವಿದೆ. ಸಮಾಜ ಸೇವಕನಾದ ಆ ವ್ಯಕ್ತಿಗೆ ಇಂತಹ ಅಂತ್ಯ ಸರಿಯಲ್ಲವೆನಿಸಿದರೂ ಸಮಾಜದಲ್ಲಿ ಇಂಥ ಮಾದರಿಗಳು ಇರುತ್ತವೆಂಬುದನ್ನು ಕತೆ ಮನವರಿಕೆ ಮಾಡಿಕೊಡುತ್ತದೆ. ಕತೆಯ ಪಾತ್ರವಾದ ಜವನೇಗೌಡನ ಅನೈತಿಕತೆ ಶಿಕ್ಷಣ ಕ್ಷೇತ್ರದ ಗೊಂದಲಗಳು ಹಲವು ಪ್ರಶ್ನೆಗಳು ಉದ್ಭವಿಸಲು ಕಾರಣವಾಗುತ್ತವೆ.

**ಸೌಂದರ್ಯವೆ ಹಗೆ, ಅದೇ ಬದುಕಿನ ಪಾವಟಿಗೆ:** ಈ ಕಥೆಯು ಸಿದ್ದಪ್ಪಾಜಿ ಎಂಬ ವ್ಯಕ್ತಿಯ ಕುರಿತಾದ ವಾಸ್ತವ ಸಂಗತಿಯೇನೋ ಎಂಬಂತೆ ನಿರೂಪಿತಗೊಂಡಿದೆ. ಚೆನ್ನಮ್ಮನ ಹಳ್ಳಿ ಹೆಸರೆತ್ತಿದ್ದರೆ ತಿಪ್ಪಸಂದ್ರ ಮತ್ತು ಮಾರನಹಳ್ಳಿಗಳು ನೆನಪಿಗೆ ಬರುತ್ತದೆ. ಏಕೆಂದರೆ ರಾಜರ ಕಾಲದಿಂದ ಮತ್ತು ಸ್ವಾತಂತ್ರ್ಯ ನಂತರ ಬಹುಕಾಲ ರಾಜ್ಯದ ವಿಧಾನಸಭೆ, ಕೈಮನೆ ಮತ್ತು ಸಂಸತ್ತುಗಳ ಸದಸ್ಯತ್ವವನ್ನು ಆಕ್ರಮಿಸಿಕೊಂಡಿದ್ದು ತಿಪ್ಪಸಂದ್ರದ ಮನೆತನದ ಇತ್ತೀಚಿನವರಲ್ಲಿ ಇಬ್ಬರು ಮುಖ್ಯರು. ಸಿದ್ದಪ್ಪಾಜಿ ಮತ್ತು ಬಸಪ್ಪಾಜಿ. ಬಸಪ್ಪಾಜಿ ವಕೀಲರಾಗಿ ನ್ಯಾಯ ವಿಧೇಯಕ ಸಭೆಯ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಜೀತ', ತಳಗವಾದಿ ಪ್ರಕಾಶನ, ೨೦೦೫, ಪುಟ. ೧೬.

ಹಾಗೂ ಸಂಸತ್ತುಗಳ ಸದಸ್ಯರಾಗಿ ಗಾಂಧೀಜಿಯ ಅನುಯಾಯಿಯಾಗಿ ದೇಶಕ್ಕೆ ಪ್ರಾಮಾಣಿಕ ಸೇವೆ ಸಲ್ಲಿಸುತ್ತಿರುತ್ತಾರೆ.

"ಸಿದ್ದಪ್ಪಾಜಿ ಲಿಂಗಮ್ಮ ಲಿಂಗಪ್ಪನವರಿಗೆ ಜಗತ್ತಿನ ಸೌಂದರ್ಯದ ಸಾರವೆಂಬಂತೆ ಮನ್ಮಥನ ಪಡಿರೂಪವೆಂಬಂತೆ ಜನಿಸುತ್ತಾನೆ. ಮಗು ಬೆಳೆಬೆಳೆಯುತ್ತ ಹೆಚ್ಚು ಹೆಚ್ಚು ಸುಂದರವಾಗಿ ಕಾಣುತ್ತಾನೆ. ಅವನ ಪ್ರತಿಯೊಂದು ಅಂಗಾಂಗದಲ್ಲಿಯೂ ಚೆಲುವು ಮುಕ್ಕಳಿಸುತ್ತದೆ. ಅವನ ಬೊಚ್ಚುಬಾಯಿ ಮುಗುಳು ನಗೆಯಲ್ಲಿ ತಂದೆ ತಾಯಿಯರು ನೋಡ ಬಂದವರು ವಿಶ್ವಚೈತನ್ಯವನ್ನೇ ಕಾಣುತ್ತಾರೆ. ಸುತ್ತಮುತ್ತಣವರು ಸಿದ್ದಾಪ್ಪಾಜಿಯ ತೊದಲು ನುಡಿಯಲ್ಲಿ ಮರಿ ಕೋಗಿಲೆಯ ಆಲಾಪವನ್ನು ಕೇಳಿ ಆನಂದಿಸುತ್ತಾರೆ. ಅವನು ಅಂಬೆಗಾಲೂರುವಂತಾದಾಗ, ಅವನ ಅಂಗಾಂಗಗಳಿಗೆ ಧೂಳು ಮೆತ್ತಿಕೊಂಡೀತೆಂಬ ಶಂಕೆಯಿಂದ ಅವನನ್ನು ಮನೆಯವರು ಕೆಳಕ್ಕೆ ಬಿಡುವುದಿಲ್ಲ. ತಂತಮ್ಮ ಮನೆಗಳಲ್ಲಿ ಮಕ್ಕಳುಬಿಟ್ಟು ಬಂದು ಸಿದ್ದಪ್ಪಾಜಿಯನ್ನೆತ್ತಿಕೊಂಡ ಕೂಡಲೇ ಅವರ ಮೊಲೆಗಳಲ್ಲಿ ಹಾಲು ಸೋರೆಬಿಡುತ್ತದೆ. ಮಗುವಿನ ಬಾಯಿಗೆ ಮೊಲೆತೊಟ್ಟು ಕೊಟ್ಟಾರೆಂಬ ಭಯದಿಂದ ತಾಯಿ ಓಡೋಡಿ ಬಂದು ಮಗುವನ್ನು ತನ್ನ ತೋಳ್ತೆಕ್ಕೆಗೆ ತೆಗೆದುಕೊಳ್ಳುತ್ತಾನೆ. ಅವನು ತಿಪ್ಪ ತಿಪ್ಪ ಹೆಜ್ಜೆಯಿಡುವಂತಾದಾಗ, ಕಾವಲಿನವರ ಕಣ್ಣು ತಪ್ಪಿಸಿ, ಪಡಸಾಲೆ, ತೊಟ್ಟಿ, ಹಿತ್ತಲುಗಳಲ್ಲೆಲ್ಲ ಓಡಾಡುತ್ತಾನೆ. ತಾಯಿ ಧೂಳು ಮೆತ್ತಿಕೊಂಡ ಬನಿಯನ್ ಚಡ್ಡಿಗಳನ್ನು ಕಳಚಿ, ಎರಡು ಮೂರು ಸಾರಿ ಸ್ನಾನಮಾಡಿಸುತ್ತಾಳೆ. ವಾರಕ್ಕೊಮ್ಮೆ-ಯಾದರೂ ಅವನಿಗೆ ಅಭ್ಯಂಜನವಾಗಲೇಬೇಕು"[೧] ಲಿಂಗಪ್ಪ ಸಿದ್ದಪ್ಪಾಜಿಯನ್ನು ಹಬ್ಬಹರಿದಿನಗಳಲ್ಲಿ ಊರೂರುಗಳಲ್ಲಿ ನಡೆಯುತ್ತಿದ್ದ ಬಯಲಾಟ ಹರಿಕಥೆಗಳಿಗೆ ಕರೆದುಕೊಂಡುಹೋಗುತ್ತಾರೆ. ಅಲ್ಲಿಂದ ಬಂದ ನಂತರ ಗೆಳೆಯರಿಗೆ ಏಕಪಾತ್ರಾಭಿನಯ ಮಾಡಿತೋರಿಸುತ್ತಾನೆ. ಜೊತೆಗೆ ಒಳ್ಳೆಯ ಕಂಠವನ್ನು ಹೊಂದಿರುವುದರಿಂದ ಊರಿನ ಹೆಂಗಸರು ಸೇರುತ್ತಾರೆ. ಲವಕುಶ ನಾಟಕದಲ್ಲಿ ಪಾತ್ರವನ್ನು ವಹಿಸಿ ಎಲ್ಲರಮೆಚ್ಚುಗೆಗೆ ಪಾತ್ರನಾಗುತ್ತಾನೆ. ಇಲ್ಲಿಂದ ಆತನಿಗೆ ನಾಟಕದ ಗೀಳುಹತ್ತುತ್ತದೆ.

ಕೆಲಗೆರೆಯ ತನ್ನಣ್ಣ ಮಲ್ಲೇಗೌಡರ ಹಿರಿಯ ಮಗಳು ಕಾವೇರಿ ಎತ್ತರದ ದೃಢಕಾಯದ ಹೆಣ್ಣಾಗಿದ್ದರೂ, ಅಷ್ಟೇನೂ ಸುಂದರಿಯಲ್ಲ; ಸಿದ್ದಪ್ಪಾಜಿಗೆ ಅನುರೂಪೆಯಂತು ಅಲ್ಲ. ಬಾಳೆಹಣ್ಣಿನ ಗುಡಾಣದಲ್ಲಿ ಬೆಳೆಸಿದ ತನ್ನ ತಾಯಿಯ ಮನಸ್ಸಿಗೆ ನೋವಾಗಬಾರದೆಂದು ಸಿದ್ದಪ್ಪಾಜಿ ಒಪ್ಪಿಕೊಳ್ಳುತ್ತಾನೆ. ಇಲ್ಲಿ ತನ್ನ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸೌಂದರ್ಯವೆ ಹಗೆ, ಅದೇ ಬದುಕಿನ ಪಾವಟಿಗೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೨೨.

ಸೋದರಮಾವನ ಮಗಳಾದರೂ ಕಪ್ಪು ವರ್ಣ ಎಂದು ಹಿಂಜರಿಯುವುದನ್ನು ನೋಡುತ್ತೇವೆ.

ಒಮ್ಮೆ ಕಾವೇರಿ ನೇರಿಳೆ ಮರ ಹತ್ತುವುದನ್ನು ಕಂಡು 'ನೀನು ಗಂಡು ಬೀರಿಯೇನೆ' ಎಂದು ಹಂಗಿಸಿದಾಗ "ಅಲ್ಲ ಕಣ್ಣೆ ಸಿದ್ದೂ, ಮರ ಹತ್ತೋದು ಗಂಡಸರಿಗೆ ಮಾತ್ರ ಮೀಸಲೇನೋ"[೧] ಎಂದವಳು ತನ್ನ ಆತ್ಮಗೌರವವನ್ನು ಬಹಿರಂಗಪಡಿಸುತ್ತಾಳೆ. ಇಲ್ಲಿ ಗಂಡುಮಕ್ಕಳು ಇಂಥಹ ಆಟವನ್ನೇ ಆಡಬೇಕು, ಕೆಲಸ ಮಾಡಬೇಕು.

ಹೆಣ್ಣು ಹೀಗೆ ಇರಬೇಕು ಅನ್ನುವ ಕಟ್ಟಳೆಗಳಿರುತ್ತದೆ. ಹೆಣ್ಣು ಮನಸ್ಸು ಮಾಡಿದರೆ ಯಾವ ಸಾಧನೆಯನ್ನು ಮಾಡಬಲ್ಲಳೆಂದು ಕಾವೇರಿ ವ್ಯಕ್ತಪಡಿಸುವುದನ್ನು ಕಾಣಬಹುದು.

ದಿನ ಕಳೆದಂತೆ ಸಿದ್ದಪ್ಪಾಜಿಗೆ ನಾಟಕದ ಗೀಳು ಅಧಿಕವಾಗುತ್ತದೆ. ಇದೇ ಸಮಯಕ್ಕೆ ಚೆನ್ನಮ್ಮನ ಹಳ್ಳಿಯಲ್ಲಿ ಬಿಡಾರ ಹೂಡಿದ್ದ ಗುಬ್ಬಿ ನಾಟಕ ಕಂಪನಿಯ ಚಂದಪ್ಪನವರಿಗೆ ಪರಿಚಯಿಸಿಕೊಡುತ್ತಾರೆ. ಸಿದ್ದಪ್ಪಾಜಿ ತಾಯಿಗೆ 'ಒಂದೆರಡು ತಿಂಗಳು ಮಾತ್ರ ಕಂಪೆನಿಯಲ್ಲಿದ್ದು ಬಂದುಬಿಡುತ್ತೇನೆ' ಎಂದು ಒಪ್ಪಿಸುತ್ತಾರೆ. ಮಗ ಬಾರದಿದ್ದನ್ನು ನೋಡಿ "ನನ್ಮಗನನ್ನು ಕರ್ಕೊಂಡು ಬಂದು ಕೊಡ್ರಪ್ಪಾ; ಹಿಂಸೆ ಮಾಡಿ ಈ ಮಂಗನ ಮುಸುಡಿ ಹೆಂಗಸನ್ನ ಮದುವೆ ಮಾಡಿದೆ ನನ್ಮಗನಿಗೆ. ಬೇರೆ ಚೆಂದುಳ್ಳಿ ಹುಡುಗಿ ತಂದು ಮದ್ವೆ ಮಾಡಿದ್ರೆ ನನ್ಮಗನ್ನ ಕಳ್ಕೋತ್ತಿರ್ಲಿಲ್ಲ"[೨] ಎಂದು ಹೇಳುವುದು ಇಲ್ಲಿ. ಮನೆಯಲ್ಲಿ, ಮಗನಿಗೆ ಏನೇ ಅನಾಹುತ ಸಂಭವಿಸಿದರೂ ಬಂದ ಸೊಸೆಯ ಕಾಲ್ಗುಣದಿಂದಲ್ಲೆ ಎಂದು ಹೇಳುವುದು. ಅಲ್ಲದೆ ತಾನೇ ಒಪ್ಪಿ ಮಗನೊಡನೆ ಮದುವೆ ಮಾಡಿಸಿದವರು. ಈಗ 'ಹೆಣ್ಣಿಗೆ ಹೆಣ್ಣೆ ಶತ್ರು' ಎಂಬಂತೆ ಅತ್ತೆಯೂ ಕೂಡ ಆಗಿದ್ದಾಳೆ.

ಸಹವಾಸ ದೋಷ ಸಂಗಡ ಕೆಡಿಸಿತು ಎನ್ನುವಂತೆ. ಸಿದ್ದಪ್ಪಾಜಿಯ ನಾಟಕ ಕಂಪೆನಿಗೆ ಸೇರಿದ ಮೇಲೆ ಶೋಕಿಗಳು ಮಿತಿಮೀರುತ್ತವೆ. ಮಹಿಳಾ ಪಾತ್ರಧಾರಿಗಳು ಅವರಿಗೆ ಗಂಟುಬೀಳುತ್ತಾರೆ. ಕಮಲಳ ಪರಿಚಯವಾಗುತ್ತದೆ. ಸಿದ್ದಪ್ಪಾಜಿಯನ್ನು ಮುಗಿಸಿಬಿಡಬೇಕೆಂದು ಊರ ಮುಖಂಡರು ಕಮಲೆಯ ಮೂಲಕ ಪ್ರಯತ್ನಿಸುವುದು, ಕಮಲೆಯು ಒಲಿದವರಿಗೆ ಮೋಸಮಾಡುವ ದುರ್ಬುದ್ಧಿಯೂ ಇಲ್ಲ. ನಟರ ಕಡೆಯವರೆ, ವಿಷ ಬೆರೆಸಿ ತಂದುಕೊಟ್ಟ ತಿಂಡಿಯನ್ನು ಸಿದ್ದಪ್ಪಾಜಿಗೆ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸೌಂದರ್ಯವೆ ಹಗೆ, ಅದೇ ಬದುಕಿನ ಪಾವಟಿಗೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೨೫.

೨. ಅದೇ, ಪುಟ. ೨೭.

ತಿನ್ನಿಸುತ್ತಾಳೆ. ಕಮಲೆಯೆ ಖಾಸಗಿ ಆಸ್ಪತ್ರೆಗೆ ಕರೆದೊಯ್ಯುತ್ತಾಳೆ. ಇಲ್ಲಿ ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಳ್ಳಬಹುದು. ಚೆನ್ನಮ್ಮನ ಹಳ್ಳಿಯಲ್ಲಿ ಬಂದು ನೆಲೆಸುವುದಾಗಿ ಮಾತುಕೊಡುತ್ತಾಳೆ. ಕೆಟ್ಟದ್ದಕ್ಕೆಲ್ಲ ಹೆಣ್ಣೆ ಕಾರಣವೆಂಬಂತೆ ನಾನು ಮತ್ತೆ ಹಿಂದಿರುಗಿ ಮನೆಗೆ ಬರುತ್ತೇನೆ. ಆದರೆ ನನ್ನದೊಂದು ಷರತ್ತಿದೆ. 'ಕಾವೇರಿ ನನಗಿಷ್ಟವಿಲ್ಲ. ಅವಳಿಂದ ಸುಖವಿಲ್ಲ. ನಿಮ್ಮ ಬಲಾತ್ಕಾರಕ್ಕಾಗಿ ನಾನು ಮದುವೆಯಾದೆ. ನಾನು ಪಟ್ಟಕಷ್ಟಗಳಿಗೆಲ್ಲ ಅವಳೆ ಕಾರಣ, ಎರಡನೆಯ ಮದುವೆಗೆ ಒಪ್ಪುವುದಾದರೆ, ನಾನೊಪ್ಪಿದ ಹೆಣ್ಣು ನಿಮಗೆ ಒಪ್ಪಿಗೆಯಾಗುವುದಾದರೆ ಎಂದು ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು ಎಂಬಂತೆ ಇವನು ಇನ್ನೊಂದು ಮದುವೆ ಮಾಡಿಕೊಳ್ಳುವುದಕ್ಕೋಸ್ಕರ ಒಂದು ನೆಪವನ್ನುಡುಕುವುದು. ಏನಾದರೂ ಆಗಲಿ ನನ್ನ ಮಗ, ಅಣ್ಣ ಮನೆಗೆ ಬಂದರೆ ಸಾಕೆಂದು ತಾಯಿ–ತಂಗಿಯರು ಒಪ್ಪಿಕೊಳ್ಳುತ್ತಾರೆ. ರೇವಣ್ಣ ಹಳ್ಳಿಯಲ್ಲಿ ಕಂಪೆನಿ ಬೀಡುಬಿಟ್ಟಾಗ ಕೆಂಪಮ್ಮನನ್ನು ನೋಡುತ್ತಾರೆ. ಆಕೆ ವಿಧವೆ. ಆದರೂ ಸಿದ್ದಪ್ಪಾಜಿ ಮಾರುಹೋಗುತ್ತಾನೆ. ಕೆಂಪಮ್ಮ ಅವನ ಕೈಹಿಡಿಯುತ್ತಾಳೆ. 'ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ' ಎಂಬಂತೆ ಕಾವೇರಿಯನ್ನು ಚೆನ್ನಾಗಿ ನೋಡಿಕೊಂಡರೂ ಅವರ ಪರವಾದ ಮನೆಯವರ ಪಕ್ಷಪಾತವನ್ನು ಸಹಿಸಲಾರದೆ, ಕಾವೇರಿ ತವರು ಮನೆಸೇರುತ್ತಾಳೆ.

ಸಿದ್ದಪ್ಪಾಜಿ ಪ್ರತಿನಿಧಿ ಸಭೆಯ ಸದಸ್ಯರಾಗುತ್ತಾರೆ. ತಮ್ಮ ವಕೀಲನಾದದ್ದು ಗಿರಿಗೌಡನಿಗೆ ಸಹಿಸಲಾಗುವುದಿಲ್ಲ. ಗಿರಿಗೌಡ ಕಾವೇರಿಗೆ ಪಾಲು ಕೊಡುವಂತೆ ಒಳ್ಳೆಯ ಕಾರ್ಯಗಳಿಗೆ ನೂರಾರು ವಿಘ್ನಗಳೆಂಬಂತೆ ಸರ್ಕಾರಿ ಶಾಲೆ ವೈದ್ಯಶಾಲೆಗಳನ್ನು ಮಂಜೂರು ಮಾಡಿಸಿದರೆ ಗಿರಿಗೌಡ ಅವುಗಳ ಅಗತ್ಯವಿಲ್ಲೆಂದು ಬೇನಾಮಿ ಅರ್ಜಿಹಾಕುತ್ತಾನೆ. ಇಲ್ಲಿ ಸಿದ್ದಪ್ಪಾಜಿ ಕೇವಲ ತನ್ನ ವೈಯಕ್ತಿಕ ಬದುಕಿನಲ್ಲಿ ಮಾತ್ರವಲ್ಲ ಇಡೀ ಊರಿನ ಜನರ ಕ್ಷೇಮಾಭಿವೃದ್ಧಿಗೋಸ್ಕರ ಹೋರಾಡುವುದನ್ನು ಗಮನಿಸಬಹುದು. ಇದಿಷ್ಟೇ ಅಲ್ಲ ವೃಕ್ಷಪ್ರೇಮಿಯೂ ಆಗಿರುತ್ತಾನೆ. ತಮ್ಮ ವಕೀಲರಾದ ಮೇಲೆ, ಪ್ರಜಾಪ್ರತಿನಿಧಿ ಸಭೆಯ ಸದಸ್ಯತ್ವವನ್ನವರಿಗೆ ಬಿಟ್ಟುಕೊಡುತ್ತಾರೆ. 'ದೇಶಸುತ್ತು : ಕೋಶ ಓದು' ಎಂಬಂತೆ ಹಿಂದಿ ಭಾಷೆಯನ್ನು ಕಲಿತು ಉತ್ತರ ಇಂಡಿಯವನ್ನೆಲ್ಲ ಸುತ್ತಿಬರುತ್ತಾರೆ. "ಅವರ ಸೌಂದರ್ಯವೇ ಅವರಿಗೆ ಹಗೆಯಾದರೂ ಅವರ ಬದುಕಿನ ಪಾವಟಿಗೆಯಾಗುತ್ತದೆ. ಅದೇ ಅವರ ಜೀವನದ ಯಶಸ್ಸಿಗೂ ಸಾರ್ಥಕತೆಗೂ ನಿರ್ಮಿತ್ತವಾಗುತ್ತದೆ"[೧]

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸೌಂದರ್ಯವೆ ಹಗೆ, ಅದೇ ಬದುಕಿನ ಪಾವಟಿಗೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೩೩.

ಸಿದ್ದಪ್ಪಾಜಿಯ ಬದುಕಿನ ನೆಲೆಯನ್ನು ಅದರ ಮೂಲಕ ಸೌಂದರ್ಯಾರಾಧನೆಯ ತಾತ್ವಿಕ ನೆಲೆಗಳನ್ನು ಇಲ್ಲಿ ಶೋಧಿಸಲಾಗಿದೆ.

**ತಾಯಿ ಮಗು:** ಈ ಕತೆಯಲ್ಲಿ ಹೆಣ್ಣು ತ್ಯಾಗಮಯಿಯಾಗಿ ಚಿತ್ರಿತಳಾಗಿದ್ದಾಳೆ. ಲೇಖಕಿಯಾಗುವ ಅರ್ಹತೆ ಇದ್ದ ತಾಯಿ ಇಲ್ಲಿ ತನ್ನ ಮಗುವನ್ನು ಸಾಕುವ ಒತ್ತಡದಲ್ಲಿ ಕತೆ ಬರೆಯುವುದನ್ನೇ ನಿಲ್ಲಿಸುತ್ತಾಳೆ. ನರೇನ್ ಮತ್ತು ಅರವಿಂದ ಇಬ್ಬರು ಮಕ್ಕಳು. ನರೇನ್‌ಗೆ ಆರು ವರ್ಷ. ಎರಡನೆಯವನು ಕೈಗೂಸು. ಪುಸ್ತಕದ ಬಗೆಗೆ ಸ್ವಲ್ಪವೂ ಆಸಕ್ತಿ ಇಲ್ಲದ ಮಗನನ್ನು ಆ ಕಡೆಗೆ ಸೆಳೆದು ದೊಡ್ಡ ವ್ಯಕ್ತಿಯನ್ನಾಗಿ ಮಾಡುವ ತಾಯಿ ಇಲ್ಲಿ ಪೂಜ್ಯಳಾಗುತ್ತಾಳೆ. ಪ್ರಾಕೃತಿಕ ಜೀವಕ್ಕೆ ಸಸ್ಯವೇ ಮೂಲ, ಪ್ರಾಣಿಗಳ ಮತ್ತು ಮನುಷ್ಯರ ರಕ್ಷಣೆ ಪೋಷಣೆಗಳಿಗೆ ಸಸ್ಯಜಗತ್ತೇ ಆಧಾರವೆಂದು, ಸೃಷ್ಟಿರಹಸ್ಯದ ಬಗ್ಗೆ ಯೋಚಿಸುತ್ತಾ ಅಂತರ್ಮುಖಿಯಾಗುತ್ತಾನೆ.

"ನರೇನ್‌ಗೆ ಮೂರು ಹೊತ್ತು ಪರಿಸರದ್ದೆ ಚಿಂತೆ. ಸೃಷ್ಟಿಯಲ್ಲಿ ಸಮತೋಲನ ತಪ್ಪಿದ್ದಾದರೆ ಜಗತ್ತಿನ ವಿನಾಶ ಖಂಡಿತ ಎಂಬುದು ಆತನ ನಿಲುವು. ಮನೆಗೆ ತನ್ನ ಗೆಳೆಯರನ್ನಾಹ್ವಾನಿಸಿ, ಅವರೊಡನೆ ಪರಿಸರದ ಬಗ್ಗೆ ಚರ್ಚೆ ನಡೆಸುತ್ತಾನೆ. ತಾನು ಓದಿದ ಕತೆಯೊಂದನ್ನು ವಿವರಿಸುತ್ತಾನೆ. ಗಿಡದಲ್ಲಿಯೇ ಧಾನ್ಯಗಳನ್ನು ತಿಂದು ಬಿಡುತ್ತಿದ್ದ ಪಕ್ಷಿಗಳನ್ನು ನಿರ್ನಾಮಮಾಡಲು ಚೀನೀ ಸರ್ಕಾರ ಯೋಜನೆಯೊಂದನ್ನು ತಯಾರಿಸಿತಂತೆ. ಹಕ್ಕಿಗಳ ಕುಲನಾಶವಾಗಲಾಗಿ ಹುಳು ಹುಪ್ಪಟೆ ಹೆಚ್ಚುತ್ತದೆ. ಅವು ಪೈರುಗಳ ಬೇರು ಕಾಂಡಗಳನ್ನೇ ತಿಂದುಬಿಡುತ್ತವೆ. ಸೃಷ್ಟಿಯಲ್ಲೊಂದು ವ್ಯವಸ್ಥೆಯಿದೆ. ಸಮತೋಲನವಿದೆ. ಅವುಗಳಿಗೆ ಭಂಗ-ಬಂದದ್ದಾದರೆ ಜೀವಜಾಲ ಚಕ್ರಕ್ಕೆ ಅಪಚಾರವೊದಗಿದ್ದಾದರೆ ಜಗತ್ತಿನ ಸಕಲಜೀವಿಗಳು ನಾಶವಾಗುವ ಕಾಲ ಬಂದೀತು. ಅವನ ಮಾತು ಮುಗಿದನಂತರ ಸಹಪಾಠಿಗಳು ಕೇಳಿದ ಪ್ರಶ್ನೆಗಳಿಗೆ ಅವನು ಉತ್ತರ ನೀಡುತ್ತಾನೆ. ಅವನ ಬುದ್ಧಿ ಚುದ್ಧಿಯನ್ನು ನೋಡಿದಾಗ ನಾನು ಲೇಖಕಿಯಾಗಲಿಲ್ಲವಲ್ಲ ಎಂಬ ಚಿಂತೆ ದೂರವಾಗುತ್ತದೆ. ಕತೆ ಕಾದಂಬರಿಗಳಿಗೆ ಬದಲಾಗಿ, ಸಮಾಜಕ್ಕೆ ಬೇಕಾದ ಒಬ್ಬ ಧನ್ವಂತರಿಯನ್ನು ಸೃಷ್ಟಿಸಿದೆನೆಂಬ ತೃಪ್ತಿ ನನ್ನ ಮನಸ್ಸನ್ನು ತುಂಬಿಕೊಳ್ಳುತ್ತದೆ"[೧] ಎಂದು ತಾಯಿ ಅಂದುಕೊಳ್ಳುತ್ತಾಳೆ.

ಈಗಿನ ಸಮಾಜದಲ್ಲಿ ಓದುವ ಹವ್ಯಾಸ ಕುಂಠಿತಗೊಳ್ಳುತ್ತಿದೆ. ಪ್ರತಿಯೊಬ್ಬ ಪೋಷಕರು ಕೂಡ ಮಕ್ಕಳಿಗೆ ಅದು ಇದು ಕೊಡಿಸುವ ಬದಲು ಒಂದೊಂದು ಪುಸ್ತಕವನ್ನು ನೀಡಿ ಕತೆಯಲ್ಲಿ ತಾಯಿ ಹೇಳುವ ಹಾಗೆ ಪುಸ್ತಕವನ್ನು ಒಂದೊಂದು

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ತಾಯಿ ಮಗು', ತಳಗವಾದಿ ಪ್ರಕಾಶನ, ೨೦೦೫, ಪುಟ. ೩೭.

ಬಹುಮಾನವಾಗಿ ಕೊಡಬಹುದು. ಆಸ್ತಿಯನ್ನು ಯಾರೂ ಬೇಕಾದರೂ ಕದಿಯಬಹುದು. ಆದರೆ ವಿದ್ಯೆಯನ್ನು ಯಾರು ಕೂಡ ಕದಿಯಲಾರರು. ಅದು ನಾವು ಜೀವಂತವಾಗಿರುವವರೆಗೂ ಅದು ನಮ್ಮ ಜೊತೆಯಲ್ಲಿಯೇ ಇರುತ್ತದೆ. ಅಲ್ಲದೆ ಬೇರೆಲ್ಲರೂ ನಮ್ಮಿಂದ ದೂರವಾದರೂ ಪುಸ್ತಕ ನಮ್ಮ ಸಂಗಾತಿಯಾಗಿ ಜೊತೆಯಲ್ಲಿಯೇ ಇರುತ್ತದೆ ಅಲ್ಲವೇ ಎನ್ನುವ ಅಂಶವನ್ನು ದೇಜಗೌರವರು ಈ ಕತೆಯ ಮುಖಾಂತರ ತಿಳಿಸಿದ್ದಾರೆನ್ನಬಹುದು. ಹೆಣ್ಣಾದವಳು ತನ್ನ ಮಕ್ಕಳನ್ನು ಸರಿಯಾದ ರೀತಿಯಲ್ಲಿ ಬೆಳೆಸಿ ಸಮಾಜದಲ್ಲಿ ಗಣ್ಯವ್ಯಕ್ತಿಯನ್ನಾಗಿ ಮಾಡಿದರೆ ಅದೇ ನೂರು ಕೃತಿಯನ್ನು ಸಮಾಜಕ್ಕೆ ಕೊಟ್ಟಂತೆ ಎಂಬುದು ಇಲ್ಲಿಯ ಆಶಯ.

**ಕುರುಡು ತಂದೆ:** ತಾಯಿ ಮಗು ಕತೆಯಲ್ಲಿ, ತಾಯಿ ತನ್ನ ಮಗನ ವಿಷಯ ಪ್ರಸ್ತಾಪಿಸಿದಂತೆ 'ಕುರುಡುತಂದೆ' ಕತೆಯಲ್ಲಿ ಮಗ ತನ್ನ ತಂದೆಯ ಸಲುವಾಗಿ ಕಾಳಜಿವಹಿಸುತ್ತಾನೆ. ಅಪ್ಪ ಕಳಸಯ್ಯ, ತಾಯಿ ಚೆಲುವಮ್ಮ. ಅಪ್ಪ ಊರಗೌಡರ ಚೇರ್ಮನ್ನರಾಗಿದ್ದ ಪಂಚಾಯಿತಿಯಲ್ಲಿ ಸದಸ್ಯರಾಗಿದ್ದರು. ಅಪ್ಪ ದೈವಭಕ್ತರು, ಸತ್ಯಸಂಧರು ಮತ್ತು ಸ್ವಾಭಿಮಾನಿಗಳು. ಗೌಡರ ಎದುರಾಳಿ ಎಲ್ಲಪ್ಪ. ಅವರ ದಾಯಾದಿಯೂ ಹೌದು. ಗೌಡರ ಮೆದೆಗೆ ಬೆಂಕಿ ಬಿದ್ದು ಭಸ್ಮವಾಗಿರುತ್ತದೆ. ಗೌಡ ಎಲ್ಲಪ್ಪನ ವಿರುದ್ಧ ಸಾಕ್ಷಿ ಹೇಳುವಂತೆ ಕಳಸಯ್ಯನನ್ನು ಕೇಳುತ್ತಾರೆ. ಆ ಸಮಯಕ್ಕೆ ಹಣದ ಆಮಿಷ ತೋರಿಸುತ್ತಾರೆ. ಬೆಂಕಿ ಯಾರಾಕಿದರೆಂಬುದು ಗೊತ್ತಿಲ್ಲ. ಬದುಕಿನಲ್ಲಿ ಸುಳ್ಳು ಹೇಳಿದವರಲ್ಲ. "ಗೌಡರೆ, ನಾನು ಬೆಂಕಿ ಹಚ್ಚಿದ್ದನ್ನು ಕಂಡೇ ಇಲ್ಲ. ಆ ಹೊತ್ತು ನಾನು ನನ್ನ ಮಾವನ ಮನೆಗೆ ನೆರವಿಯೂಟಕ್ಕೆ ಹೋಗಿದ್ದೆ. ಕೈಮುಗಿತೀನಿ. ನನ್ನ ಬಾಯಲ್ಲಿ ಸುಳ್ಳು ಹೇಳಿಸಬೇಡಿ. ನೀವು ಕೊಡುವ ಹಣ ನನಗೆ ಪಾಷಾಣಕ್ಕೆ ಸಮ"[೧] ಎಂದು ಹೇಳುತ್ತಾರೆ. ಇಲ್ಲಿ ಕಳಸಯ್ಯನ ಪ್ರಾಮಾಣಿಕತೆ, ಸುಳ್ಳು ಹೇಳಿದವರು, ಮೋಸಮಾಡಿದವರು ಉದ್ಧಾರವಾಗೋಲ್ಲ, ಇನ್ನೊಬ್ಬರಿಗೆ ನಮ್ಮಿಂದ ತೊಂದರೆಯಾಗಬಾರದು, ಬೇರೆಯವರಾದರೂ ಇದ್ದರೆ ಹಣದ ಆಸೆ ಸುಳ್ಳನ್ನು ಹೇಳುತ್ತಿದ್ದರೇನೊ? ಆದರೆ ಕಳಸಯ್ಯ ಎಷ್ಟು ಬಡತನದಲ್ಲಿದ್ದರೂ ಸುಳ್ಳು ಹೇಳುವುದಿಲ್ಲ. ಇಲ್ಲಿ ಆತನ ಪ್ರಾಮಾಣಿಕತೆ ಕಂಡುಬರುತ್ತದೆ.

ಬೇಸಾಯದ ಜೊತೆಗೆ ರೇಷ್ಮೆ ಸಾಕಾಣಿಕೆಯ ಉದ್ಯೋಗವನ್ನು ನಡಸುತ್ತಿದ್ದರು. ಹಿಪ್ಪಲಿ ನೇರಳೆ ಸೊಪ್ಪು ತರಲು ಹೋದಾಗ ಕಡ್ಡಿಯೊಂದು ಅಪ್ಪನ ಬಲಗಣ್ಣಿಗೆ ಗಾಯವಾಗಿ ಕಣ್ಣು ಕಾಣದಂತಾಗುತ್ತದೆ. ಮತ್ತೊಂದು ಈ ರೀತಿಯ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಕುರುಡು ತಂದೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೪೦.

ಘಟನೆಗಾಗಿ ಎಡಕಣ್ಣು ಕಳೆದುಕೊಳ್ಳುತ್ತಾರೆ. ಅಯ್ಯೊ "ಹಿಂದಿನ ಜನ್ಮದಲ್ಲಿ ಯಾರ ಕಣ್ಣು ಚುಚ್ಚಿದೆನೊ? ಯಾರಿಗೆ ಕೇಡು ಮಾಡಿದೆನೊ? ಆ ಪಾಪ ನನ್ನನ್ನೀಗ ಕುರುಡುಮಾಡಿ ಕಾಡುತ್ತಿದೆ".[೧] ನಮ್ಮ ಹಿಂದು ಧರ್ಮಿಯರ ಕಲ್ಪನೆಯ ಹಾಗೆ, ನಮ್ಮ ಪಾಪ-ಪುಣ್ಯದ ಪ್ರತಿಫಲವಾಗಿ ಈ ಜನ್ಮದಲ್ಲಿ ಅನುಭವಿಸುತ್ತೇವೆಂಬುದನ್ನು ಕಳಸಯ್ಯನು ಇಲ್ಲಿ ಪರಿತಪಿಸುವುದನ್ನು ಕಾಣಬಹುದು. ಇಷ್ಟಾದರೂ ಮಕ್ಕಳಿಗೆಲ್ಲ ಯಾವಾಗಲೂ "ಸತ್ಯವನ್ನೆ ಹೇಳಿ, ಯಾರನ್ನೂ ವಂಚಿಸಬೇಡಿ, ನಿಮಗಿನ್ನು ಮೇಲೆ ನಿಮ್ಮವ್ವನೇ ಗತಿ. ನನಗೂ ಅವಳೇ ಗತಿಮತಿ"[೨] ಎಂದು ಹೇಳುತ್ತಾರೆ.

ಕಳಸಯ್ಯನ ತಮ್ಮ ಲಿಂಗೇಗೌಡ ಕಳಸಯ್ಯನ ಪಾಲಿಗೆ ಬಂದಿದ್ದ ಹುಣಿಸೆಮರ ಹಿಪ್ಪೇಮರಗಳ ಫಸಲನ್ನು ಲಿಂಗೇಗೌಡ ಸೂರೆಮಾಡುತ್ತಾನೆ. ಇದು ಸರಿಯಲ್ಲ ಎಂದು ಹೇಳುತ್ತಾರೆ. ಕಳಸಯ್ಯನಿಗೆ ಹೊಡೆದು ಕಳಿಸುತ್ತಾರೆ. ದಾಯಾದಿಗಳ ಹಿಂಸೆಯು ಮುಂದುವರೆಯುತ್ತದೆ.

ಹೀಗಿರುವಾಗ ಒಮ್ಮೆ ಬರಗಾಲ ಬಂದೊದಗುತ್ತದೆ. ಕೆರೆಕಟ್ಟೆಗಳೆಲ್ಲ ಒಣಗಿ ಭೂಮಿ ಬಂಜಾರಾಗಿರುತ್ತದೆ. ದುಡ್ಡು ಕೊಟ್ಟರೂ ರಾಗಿ ಸಿಗುವುದಿಲ್ಲ. ಕದೀಮರು ಇಲ್ಲಿ ಹೆಚ್ಚಿನ ಬೆಲೆಗೆ ರಾಗಿಯನ್ನು ಮಾರಾಟಮಾಡಿ ಹಣಸಂಪಾದಿಸುತ್ತಾರೆ. ಅಪ್ಪ ಮಾರಾಟಗಾರರ ಮನೆಬಾಗಿಲನ್ನು ಕಾಯ್ದುಕೊಂಡಿದ್ದು ಹಸುಬೆಚೀಲದಲ್ಲಿ ತುಂಬಿಕೊಂಡು ಬರುತ್ತಾರೆ. ಅದನ್ನು ಬೀಸಿ ಕುಟ್ಟಿ ಅಂಬಲಿ ಮಾಡಿ ಮಕ್ಕಳಿಗೆ ಬಡಿಸು; ಆ ಗಟ್ಟಿ ಅಂಬಲಿಗೆ ನೀರುಬೆರೆಸಿ ತೆಳ್ಳಗೆ ಮಾಡು. ಅದು ನಮಗಿರಲಿ' ಎಂದು ಅಪ್ಪ ಹೇಳುತ್ತಾನೆ. ತಾವು ಹಸಿದುಕೊಂಡಿದ್ದರೂ ಪರ್ವಾಗಿಲ್ಲ ಮಕ್ಕಳು ಗಟ್ಟಿ ಅಂಬಲಿಯನ್ನಾದರೂ ಕುಡಿಯಲಿ ಎಂದು.

ದೊಡ್ಡಮಗ ಲೋಯರ್ ಸೆಕಂಡರಿ ಪರೀಕ್ಷೆಯಲ್ಲಿ ಫೇಲಾಗಿ ಓದುವುದಿಲ್ಲವೆಂದು ಊರಿಗೆ ಬರುತ್ತಾನೆ. ಮಗ ಬಂದರೂ ಅವ್ವನ ಕಷ್ಟ ತಪ್ಪಲಿಲ್ಲ. ಪ್ರಾಪ್ತವಯಸ್ಸಿನಲ್ಲಿ ಮದುವೆ ಮಾಡದಿದ್ದರೆ, ಯುವಕರು ದಾರಿತಪ್ಪುತ್ತಾರೆ. ಮಗನಿಗೆ ಮದುವೆಮಾಡುತ್ತಾರೆ. ಸೊಸೆಯ ಮಾತು ದನಿಗಳ ಮೂಲಕ ಅವಳ ನಡತೆಯನ್ನರಿಯುತ್ತಾರೆ. ಎರಡನೆಯ ಮಗ ಆನರ್ಸ್‌ನಲ್ಲಿ ತೇರ್ಗಡೆಹೊಂದುತ್ತಾನೆ. ವರ್ತಕರೊಬ್ಬರ ಮಗಳನ್ನು ಮದುವೆಯಾದರೆ ಮುಂದಿನ ಓದಿಗೆ ಅನುಕೂಲವಾಗುತ್ತೆಂದು ಸ್ನೇಹಿತರು ಪ್ರಯತ್ನ ನಡೆಸುತ್ತಿದ್ದರು. ಆ ಸುದ್ದಿ ಅಪ್ಪನಿಗೆ ಗೊತ್ತಾಗಿ 'ಪಟ್ಟಣಿಗರ ಜಾತಿ ಕುಲ ಗೊತ್ತಾಗೋಲ್ಲ. ಹತ್ತಿರದ ಊರಿಂದ ಹೆಣ್ಣು

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಕುರುಡು ತಂದೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೪೧.
೨. ಅದೇ, ಪುಟ. ೪೧.

ತಂದರೆ ನಂಟಸ್ತನ ಅನುಕೂಲವಾಗುತ್ತದೆಂದು ಹೇಳುತ್ತಾನೆ. ನೀವು ಒಪ್ಪಿದ ಹುಡುಗಿಯನ್ನೇ ಮದುವೆಯಾಗುವುದಾಗಿ ಹೇಳುತ್ತಾನೆ. ಮಗನ ಮದುವೆ ಪಕ್ಕದೂರಿನ ಪಟೇಲರ ಮಗಳ ಜೊತೆ ಮದುವೆಯಾಗುತ್ತದೆ. ಮಗನ ಮದುವೆಯನ್ನು ನೋಡಲಾಗದ ಬದುಕು ವ್ಯರ್ಥವೆಂದುಗೊಳ್ಳುತ್ತಾನೆ. ಇಲ್ಲಿ ಮಗ ಎಷ್ಟೆ ಓದಿ, ದೊಡ್ಡವನಾದರೂ ತಂದೆಯ ಮೇಲಿನ ಪ್ರೀತಿಯಿಂದ ಅಪ್ಪ ಒಪ್ಪಿದ ಹುಡುಗಿಯನ್ನೇ ಮದುವೆಯಾಗುತ್ತಾನೆ. ಕೆಲಸದ ನಿಮಿತ್ತ ಬೇರೆ ಊರಿಗೆ ಮಗ ಹೋಗಲಾಗಿ ಮಗ ಹತ್ತಿರವಿಲ್ಲವೆಂಬ ನಿರಾಶೆಯ ಚಿಂತೆಯಿಂದಲೊ ವಯಸ್ಸಿನ ಕಾರಣದಿಂದಲೋ ಅನಾರೋಗ್ಯಪೀಡಿತರಾಗುತ್ತಾರೆ. ಕೆಲದಿನಗಳ ನಂತರ ಕಳಸಯ್ಯ ತೀರಿಹೋಗುತ್ತಾರೆ. ಸಾಯುವ ಸಮಯದಲ್ಲಿ ನಾನಿರಲಿಲ್ಲವೆಂದು ಅವರ ಋಣವನ್ನು ತೀರಿಸಲಿಲ್ಲವೆಂದು ಮಗನ ಮನಸ್ಸು ಆಗಾಗ್ಗೆ ಘಾಸಿಗೊಳಿಸುತ್ತಿರುತ್ತದೆ.

ಹೀಗೆ ತಂದೆತಾಯಿಂದಿರ ಪ್ರೀತಿ ವಾತ್ಸಲ್ಯಗಳನ್ನು ತಿಳಿಸುವ ಈ ಕತೆ ಕುರುಡನಾದ ತಂದೆಯ ಮಮತೆಯನ್ನು ಸಾದರಪಡಿಸುತ್ತದೆ. ಒಂದೇ ಎಳೆಯಲ್ಲಿ ಸಾಗಿ ಮುಕ್ತಾಯವನ್ನು ಪಡೆಯುವ ಕತೆ ಇದಾಗಿದೆ.

ದೇಜಗೌ ಈ ಕತೆಯಲ್ಲಿ ಗ್ರಾಮೀಣ ಸೊಗಡಿನ ಶಬ್ದಗಳನ್ನು ಈ ರೀತಿ ಬಳಸಿಕೊಂಡಿದ್ದಾರೆಂದರೆ ಪಲ್ಲಂಟೆ, ಏರು, ನೆಲದಾಯಿ ಹಿಳಿಲಿ ತಿಸರ, ಮೋದು ಈ ಪದಗಳನ್ನು ನೋಡಬಹುದು.

**ವೀರಣ್ಣನ ಮದುವೆ:** ಈ ಕತೆಯೂ ಸರ್ಕಾರಿ ಉದ್ಯೋಗದಲ್ಲಿದ್ದು ಉತ್ತಮ ಸಂಬಳ ಪಡೆಯುತ್ತಿದ್ದರೂ ತನ್ನ ಕಪ್ಪು ಬಣ್ಣದ ಕಾರಣವಾಗಿ ಯಾವುದೇ ಹೆಣ್ಣು ತನ್ನನ್ನು ಮದುವೆಯಾಗಲು ಮುಂದೆ ಬರದ ವ್ಯಕ್ತಿಯೊಬ್ಬನ ಕತೆಯನ್ನು ನಿರೂಪಿಸಲಾಗಿದೆ.

ವೀರಣ್ಣ ಬಿ.ಎ., ಬಿ.ಎಡ್. ಮುಗಿಸಿ, ಪ್ರೌಢಶಾಲಾ ಉಪಾಧ್ಯಾಯನಾಗಿದ್ದರೂ ಇನ್ನು ಮದುವೆಯಾಗಿರಲಿಲ್ಲ. ಸ್ನೇಹಿತ ಕೇಳಿದಾಗ ಈ ಕರಿಯನಿಗೆ ಯಾರುಹೆಣ್ಣು ಕೊಡುತ್ತಾರೆ? ಎಂದಾಗ "ಬಣ್ಣ ಮುಖ್ಯ ಅಲ್ಲ ಕಣಯ್ಯ. ಅದು ಆಯಾಯ ಪ್ರದೇಶದ ಹವಾಮಾನ ಸ್ನಾನಾಹಾರಾದಿ ಭೋಗ ಸಂಪತ್ತನ್ನವಲಂಬಿಸಿದೆ. ಆಫ್ರಿಕಾದ ಜನರೆಲ್ಲರೂ ಕರಿಯರಲ್ಲವೇ? ಬೌದ್ಧಿಕ ಹಾಗೂ ಸಾಂಸ್ಕೃತಿಕ ವಿಷಯಗಳಲ್ಲಿ ಅವರು ಜಗತ್ತಿನ ಯಾವ ಜನಾಂಗಕ್ಕೆ ಕಡಿಮೆಯಿದ್ದಾರೆ? ಉಡುಪಿಯ ಕೃಷ್ಣ ಅಯೋಧ್ಯಾರಾಮ, ಪಾಂಡವರ ಪತ್ನಿ ದ್ರೌಪದಿ, ಜನಕಪುತ್ರಿ ಸೀತೆ ಕಪ್ಪಲ್ಲವೇ? ಕಪ್ಪು ಬಣ್ಣಕ್ಕೂ ಸ್ಥಾನವಿದೆ; ಅದೂ ಸೌಂದರ್ಯವರ್ಧಕವಾಗಬಲ್ಲದು?"[೧] ಎಂದು

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ವೀರಣ್ಣನ ಮದುವೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೫೧.

ಹೇಳುವಾಗ ವರ್ಣದ ಸಮಸ್ಯೆಯ ಭಾಗವಾಗಿ ಪುರಾಣ, ಸಾಹಿತ್ಯ, ಚರಿತ್ರೆ ಮತ್ತು ಸಮಾಜದ ಸಂಗತಿಗಳೆಲ್ಲ ಹಾದು ಹೋಗುವುದರಿಂದ ಚಿಂತನೆಗೆ ಹೊಸ ಗ್ರಾಸ ಒದಗಿದಂತಾಗಿದೆ.

ವೀರಣ್ಣ ಮದುವೆಯಾಗದಿರುವುದಕ್ಕೆ ಕಪ್ಪುವರ್ಣವಲ್ಲದೆ ಸಂಶಯ ಅವನನ್ನು ಕಾಡುತ್ತಿರುತ್ತದೆ. 'ಅನುಮಾನಂ ಪೆದ್ದರೋಗಂ' ಎಂಬಂತೆ. ಒಂದು ಕುಟುಂಬದ ಕತೆ ಗಂಡ ಚೆನ್ನಾಗಿ ಅನುಕೂಲಸ್ಥನೂ ಹೆಂಡತಿ ಮಹತ್ವಾಕಾಂಕ್ಷಿ ಬಹುಬೇಗ ಲೋಕ ಪ್ರಸಿದ್ಧಿಯನ್ನು ಪಡೆಯಬೇಕೆಂದು ಗಣ್ಯರ ಜೊತೆಯಲ್ಲಿ ಓಡಾಡುತ್ತಿರುತ್ತಾಳೆ. ಸಂಶೋಧನೆ ಮಾಡುವ ವಿದ್ಯಾರ್ಥಿನಿಯರು ಪ್ರಾಧ್ಯಾಪಕ-ರೊಂದಿಗೆ ಚೆಲ್ಲಾಟವಾಡುತ್ತಾರೆ. ಈ ರೀತಿ ಹೆಣ್ಣನ್ನು ನಂಬಿ ಹೇಗೆ ಮದುವೆ-ಯಾಗುವುದೆಂತೂ ಎಂದು ಹೇಳಿದಾಗ ವೀರಣ್ಣ ನೀನು ತಿಳಿದುಕೊಂಡಿರುವುದು ತಪ್ಪು. ಒಬ್ಬಿಬ್ಬರು ಕೆಟ್ಟ ಹೆಣ್ಣುಗಳಿದ್ದಾರೆಂದು, ಇಡೀ ಸ್ತ್ರೀಕುಲವನ್ನೇ ದೂರುವುದು ತಪ್ಪೆಂದು ಹೇಳುವುದು. ಇದೆಲ್ಲ ಋಣಾನುಬಂಧ, ಮದುವೆಗಳು ಸ್ವರ್ಗದಲ್ಲೆ ನಿಶ್ಚಯವಾಗಿರುತ್ತದೆ' ಎಂದು ಮನಸ್ಸಿನ ಸಂಶಯವನ್ನು ದೂರಮಾಡಬೇಕೆಂದು ಹೇಳಿ ಅವನೇ ಹುಡುಗಿಯನ್ನು ಹುಡುಕುವುದಾಗಿ ಹೇಳುತ್ತಾನೆ.

ಪದ್ಮಿನಿ ಸುರೂಪಿಯಲ್ಲದಿದ್ದರೂ ಸುವಿವೇಕಿ ಆಗಿದ್ದಳು. ಇವಳು ಉಪಾಧ್ಯಾಯಿನಿಯಾಗಿದ್ದಳು. ಯಾರು ಒಪ್ಪುತ್ತಿರಲಿಲ್ಲ. ವೀರಣ್ಣ ಅವಳನ್ನೊಪ್ಪಿ-ಕೊಳ್ಳುತ್ತಾನೆ. ಇಲ್ಲಿಯ ಸಮಸ್ಯೆ ಎಂದರೆ ಇಬ್ಬರೂ ಕಪ್ಪುಬಣ್ಣದವರಾದರೆ ತಮಗೆ ಹುಟ್ಟುವ ಮಕ್ಕಳು ಕಪ್ಪಾಗಿ ಮುಂದೆ ಅವರೂ ನಮ್ಮಂತೆ ಅನುಭವಿಸಬಾರದೆಂಬುದೇ ಆಗಿದೆ. ಅದಕ್ಕಾಗಿ ಮದುವೆಗೆ ಮೊದಲೇ ತಮಗೆ ಮಕ್ಕಳು ಬೇಡ ಎಂಬ ತೀರ್ಮಾನಕ್ಕೆ ವೀರಣ್ಣ ಮತ್ತು ಪದ್ಮಿನಿ ಬರುತ್ತಾರೆ.

ಪ್ರತಿಯೊಂದು ಹೆಣ್ಣು ಆಕೆ ತಾಯಿಯಾದಾಗ ಮಾತ್ರ ಹೆಣ್ತನ ಸಾರ್ಥಕವೆಂದು ಹೇಳುತ್ತಾರೆ. ಆದರೆ ಪದ್ಮಿನಿ ತಾವು ಪಟ್ಟ ಕಷ್ಟವನ್ನು ತನ್ನ ಮಕ್ಕಳು ಅನುಭವಿಸಬಾರದೆಂದು ತೀರ್ಮಾನ ತೆಗೆದುಕೊಳ್ಳುವುದು ಸರಿಯೆನ್ನಿಸುತ್ತದೆ. ಪದ್ಮಿನಿ ಮತ್ತು ವೀರಣ್ಣನನ್ನು ಮೆಚ್ಚಬೇಕಾದದ್ದೆ.

**೭. ಸ್ವರ್ಗದವರು ಧರೆಗಿಳಿದಾಗ:** ಈ ಕತೆಯಂತೂ ಜಾಗತಿಕ ಸಾಹಿತ್ಯವನ್ನು ಪರಿಚಯಿಸುವಂತಿದೆ. ತಂತ್ರದ ದೃಷ್ಟಿಯಿಂದಲೂ ಗಮನಸೆಳೆಯುವ ಈ ಕತೆ ಕನ್ನಡಾಭಿಮಾನವನ್ನು ಪ್ರಕಟಿಸುವಂಥದ್ದು. ಅಗೋಚರ ಲೋಕದಲ್ಲಿರುವ ಬಿಎಂಶ್ರೀ ಅನಕೃ ಅವರು ಷೇಕ್ಸ್‌ಪಿಯರ್ ಖಲೀಲ್‌ಗಿಬ್ರಾನ್ ಮುಂತಾದವರ ಜೊತೆ ಬಂದು ಇಡೀ ಪ್ರಪಂಚದ ಎಲ್ಲಾ ಭಾಷೆಯ ಸಾಹಿತ್ಯವನ್ನು ಅವುಗಳು ಈಗಿರುವ ಸ್ಥಿತಿಯನ್ನು ನೋಡುತ್ತ ಪರಿಶೀಲನೆ ಮಾಡುವ ರೀತಿ ಕುತೂಹಲಕಾರಿಯಾದದ್ದು.

ರಾಷ್ಟ್ರಕವಿಯನ್ನು ಇಂಗ್ಲೆಂಡಿನ ಜನ ಮರೆಯಲಿಲ್ಲವೆಂದು ಶೇಕ್ಸಪಿಯರ್ ತಾವು ವಾಸಿಸುತ್ತಿದ್ದ ಮನೆ ಪದಾರ್ಥಗಳು ಹೇಗಿದ್ದವೋ ಹಾಗೆ ಇರುವುದು ಎಂದುಕೊಂಡು ಭಾವಪರವಶರಾಗುತ್ತಾರೆ. ವಾಲ್ಟರ್ ಸ್ಕಾಟ್ ಚಿಕ್ಕಂದಿನ ಜ್ವರದಿಂದ ಕುಂಟನಾದರೂ ಜಗ್ಗದೆ, ಧೈರ್ಯ ಸಾಹಸಗಳಿಂದ ಜೀವನ ಸಾಧಿಸಿದ್ದನ್ನು, ವರ್ಡ್ಸ್‌ವರ್ತನ ಹುಟ್ಟೂರಿಗೆ ಹೋಗಿದ್ದಾಗ ಸರೋವರ ಪ್ರಾಂತ್ಯದಲ್ಲಿಯ ಪ್ರಕೃತಿಯ ಸೊಬಗನು ಪಾಶ್ಚಾತ್ಯಲೋಕದ ಆದಿಕವಿ ಹೋಮರ್ ಕುರುಡ, ಚಾರಣ ಕವಿ ಜಗತ್ತಿನ ಅತ್ಯುಚ್ಚ ಕವಿ ಎಂದು ಹೆಸರು ಮಾಡಿದ್ದ ವರ್ಜಿಲ್, ಫ್ಲಾರೆನ್ಸ್‌ನಲ್ಲಿ ಹುಟ್ಟಿದ ಡಾಂಟೇ ಗಡಿಪಾರು ಮೊದಲಾದ ಶಿಕ್ಷೆಗಳನ್ನನುಭವಿಸಬೇಕಾಗುತ್ತದೆ. ಬದುಕಿದ್ದಾಗ ಇಂಥ ಮಹಾ ಕವಿಗಳ ಊರುಗಳಿಗೆ ಹೋಗಲಿಲ್ಲವೆಂಬ ಬೇಸರ ಶ್ರೀಯವರಿಗಿದ್ದೇ ಇತ್ತು. ಈಗ ಶೇಕ್ಸ್‌ಪಿಯರ್‌ನೊಡನಿರುವಾಗ ಅವರ ಹರ್ಷ ಹೇಳತೀರದು.

ರಷ್ಯಾದಲ್ಲಿ ಪುಷ್ಕಿನ್ ಮತ್ತು ಟಾಲ್‌ಸ್ಟಾಯ್‌ರ ದುರಂತ ಕಥೆಗಳನ್ನು ಕೇಳಿ ಕಳವಳಕ್ಕೀಡಾಗುತ್ತಾರೆ. ಶ್ರೀಮಂತನೊಬ್ಬ ಪುಷ್ಕಿನ್‌ನ ಹೆಂಡತಿಯನ್ನು ಕೆಣಕಿದಾಗ ಅವರಿಬ್ಬರ ನಡುವಿನ ಯುದ್ಧದಲ್ಲಿ ಪುಷ್ಕಿನ್ ಸಾಯುತ್ತಾನೆ. ಕವಿಗಳು ಆತ್ಮಾಹುತಿಗೂ ಸಿದ್ದವಾಗಿರಬೇಕೆಂದು ಮಾತಾಡಿಕೊಳ್ಳುತ್ತಾರೆ. ಇದೇ ರೀತಿ ಟಾಲ್‌ಸ್ಟಾಯ್ ಭೂರ್ಜ ವೃಕ್ಷದ ವಿಷಯವಾಗಿ ಉಳುವವನಿಗೇ ನೆಲ ಸಲ್ಲಬೇಕೆಂದವನು ಜೀತಗಾರರಿಗೆ ಹಂಚಿಕೊಟ್ಟಾಗ, ಅವನಿಗೂ ಹೆಂಡತಿಗೂ ಮನಃಸ್ತಾಪ ಮೂಡುವುದು. ಪರದೇಶಿಯಂತೆ ಟಾಲ್‌ಟಾಯ್ ಯಾವುದೋ ರೈಲು ನಿಲ್ದಾಣದಲ್ಲಿ ಅವನು ಸಾಯುವುದು ನೆನಪಿಗೆ ಬರುತ್ತದೆ.

ಶೇಕ್ಸ್‌ಪಿಯರ್ ಸಂಗಡಿಗರು ಇಂಡಿಯಾ ತಲುಪುತ್ತಾರೆ. ಶ್ರೀರಾಮಕೃಷ್ಣ ಪರಮಹಂಸ. ಸ್ವಾಮಿವಿವೇಕಾನಂದ, ಶ್ರೀ ಅರವಿಂದ, ಬಂಕಿಮಚಂದ್ರ, ಗಾಂಧೀಜಿಯವರ ಸಾಧನೆ ಟ್ಯಾಗೋರರಿಂದ ಶೇಕ್ಸ್‌ಪಿಯರ್ ಕೇಳುತ್ತಾರೆ. ಹೀಗೆ ಸಂಚರಿಸಬೇಕಾದರೆ ಬುದ್ಧ, ಮಹಾವೀರ, ಗುರುನಾನಕ್, ವೀರ ತುಳಸಿದಾಸ ಮಹದ್ದರ್ಶನ ಮಾಡುತ್ತಾರೆ. ಜಗತ್ತಿನ ಸಕಲಧರ್ಮಗಳಿಗೂ ಭಾರತ ಆಶ್ರಯ ನೀಡಿರುವ ಸಂಗತಿಯನ್ನು ಕೊಂಡಾಡುತ್ತಾರೆ. ಆದ್ದರಿಂದ ನಮ್ಮ ಭಾರತ ದೇಶವು ವಿವಿಧತೆಯಲ್ಲಿ ಏಕತೆಯನ್ನು ಸಾರುವಂತಹದ್ದೆಂದು ಇದರಿಂದ ತಿಳಿದುಬರುತ್ತದೆ.

"ಶೇಕ್ಸ್‌ಪಿಯರ್‌ರಿಗೆ ಶ್ರೀಯವರಲ್ಲಿ ಅಪಾರ ವಿಶ್ವಾಸ, ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದಾಗ ಶ್ರೀಯವರು ಆರಾಧನಾ ರೀತಿಯಲ್ಲಿ ಶೇಕ್ಸ್‌ಪಿಯರರ ನಾಟಕಗಳನ್ನು ಅಧ್ಯಯನ ಮಾಡಿದ್ದರು; ವಿದ್ಯಾರ್ಥಿಗಳಿಗೆ ಬೋಧಿಸಿದ್ದರು; ಸಭೆ ಸಮಾರಂಭಗಳಲ್ಲಿ ಅವುಗಳ ಪ್ರವಚನ ನಡೆಸಿದ್ದರು. ಎಲ್ಲಿಯೋ ಹುಟ್ಟಿ ಬೆಳೆದ, ಯಾವ ವಿಧವಾದ ಸಂಬಂಧವೂ ಇಲ್ಲದ ನಾಟಕಕಾರನನ್ನು ಅಧ್ಯಯನ ಬೋಧನೆ

ಪ್ರಚಾರ ಭಾಷಣ, ಭಾಷಾಂತರ ಮತ್ತು ರಂಗ ಪ್ರದರ್ಶನದ ಮೂಲಕ ಜನಪ್ರಿಯಗೊಳಿಸಿದ ಔದಾರ್ಯದಿಂದಾಗಿ, ಶೇಕ್ಸ್‌ಪಿಯರರಿಗೆ ಭಾರತೀಯರ ಬಗ್ಗೆ, ಶ್ರೀಯವರಂಥ ವಿದ್ವಾಂಸರ ಬಗ್ಗೆ ಅಪಾರ ಗೌರವ. ಅದರಿಂದಾಗಿ ಕನ್ನಡದ ಬಗ್ಗೆ ಕನ್ನಡ ಸಾಹಿತ್ಯದ ಬಗ್ಗೆ ಹಾಗೂ ಕರ್ನಾಟಕ ಸಂಸ್ಕೃತಿಯ ಬಗ್ಗೆ ಮೂಲಚಾರವಾಗಿ ತಿಳಿಯುವ ಆಸೆ ಅವರದು. ಶ್ರೀಯವರು ಕನ್ನಡ ಭಾಷೆಯ ಪ್ರಾಚೀನತೆಯನ್ನು ಸವಿಸ್ತರವಾಗಿ ಕಥನಿಸಿದಾಗ, ಅವರಿಗೆ ಅಚ್ಚರಿಯಾಗುತ್ತದೆ"[೧]

'ಪಂಪ ಕನ್ನಡದ ಆದಿಕವಿ ಮಾತ್ರವಲ್ಲ, ಮಹಾಕವಿಯೂ ಹೌದು. ೧೨ನೆಯ ಶತಮಾನದ ಸಮಗ್ರಕ್ರಾಂತಿ. ಅದು ಧಾರ್ಮಿಕ, ಆರ್ಥಿಕ, ಸಾಮಾಜಿಕ ಹಾಗೂ ಸಾಹಿತ್ಯ ಕ್ರಾಂತಿಗಳನ್ನು ಏಕಕಾಲದಲ್ಲಿ ಜಗಜ್ಯೋತಿ ಬಸವಣ್ಣನವರು ನಡೆಸಿದರೆಂದಾಗ, 'ವಚನಗಳೆಂದರೇನು'? ಎಂಬ ಪ್ರಶ್ನೆಗೆ

'ಗದ್ಯಕವಿತೆಗಳು ಎಂಥ ಗಹನವಾದ ತತ್ತ್ವಾಲೋಚನೆಗಳನ್ನಾಗಲಿ, ಗಾಢವಾದ ಭಾವಾನುಭವ ಅನುಭಾವಗಳನ್ನಾಗಲಿ ವಚನ ಮಾಧ್ಯಮದಲ್ಲಿ ಸಾಮಾನ್ಯರಿಗೂ ತಿಳಿಯುವಂತೆ ಹೇಳಬಹುದು"[೨] ಎಂದು ಹೇಳುತ್ತಾ ಸ್ತ್ರೀಯರಿಗೂ ಕೂಡ ಸಮಾನವಾದ ಸ್ಥಾನಮಾನ ನೀಡಿದ್ದನ್ನು ಅವರು ಕೂಡ ವಚನಗಳನ್ನು ರಚಿಸುತ್ತಿದ್ದರೆಂದು ಅಸಮಾನತೆಯನ್ನು ಸಂಪೂರ್ಣವಾಗಿ ತೊಲಗಿಸುವುದೇ ಬಸವಣ್ಣನವರ ಉದ್ದೇಶವಾಗಿತ್ತೆಂದು ಹೇಳುತ್ತಾರೆ.

'ಕನ್ಯಪತುಂಗ ಚಕ್ರವರ್ತಿ ಕನ್ನಡ ನಾಡಿನ ವಿಸ್ತಾರವನ್ನು ಜನರ ಹಿರಿಮೆಯನ್ನು ತನ್ನ ಗ್ರಂಥದಲ್ಲಿ ರಚಿಸಿರುವುದನ್ನು, ಚಾಲುಕ್ಯ ರಾಷ್ಟ್ರಕೂಟ ಚಕ್ರವರ್ತಿಗಳು ಭರತ ಖಂಡವನ್ನೆಲ್ಲ ವಶಪಡಿಸಿಕೊಂಡದ್ದು ಸಾಹಿತ್ಯಕ್ಕಷ್ಟೆ ಅಲ್ಲದೆ ಸಂಗೀತ, ಚಿತ್ರ ಶಿಲ್ಪ, ನೃತ್ಯಕಲೆಗಳಲ್ಲಿಯೂ ಹೆಸರು ಮಾಡಿರುವ ಕಲಾವಿದರಿದ್ದಾರೆಂದು ಶ್ರೀ ಹೇಳುತ್ತಾರೆ. ಇದರಿಂದ ಕನ್ನಡನಾಡು ಸಂಪದ್ಭರಿತ ನಾಡೆಂಬುದು ತಿಳಿಯುತ್ತದೆ.

ಆಗ 'ಕನ್ನಡ ಅಭಿವೃದ್ಧಿ ಪ್ರಾಧಿಕಾರ' ಎಂಬ ನಾಮಫಲಕವನ್ನು ಕಂಡ ಷೇಕ್ಸ್‌ಪಿಯರ್ ಆ ಬೋರ್ಡ್ ಏಕೆ' ಎಂದು ಕೇಳುತ್ತಾನೆ. ವ್ಯಕ್ತಿ ಜೀವನದಲ್ಲೆಂತೋ ಒಂದು ಜನಾಂಗದ, ಒಂದು ಭಾಷೆಯ ಬದುಕಿನಲ್ಲಿಯೂ ಏರಿಳಿತಗಳು ಇದ್ದೆ ಇರುತ್ತವೆ. ಒಂದು ಭಾಷೆಯ ವ್ಯಾಪ್ತಿ ಮತ್ತು ಶ್ರೀಮಂತಿಕೆ ಅದನ್ನಾಡುವ ಜನರ ಸಾಧನೆಸಿದ್ಧಿಗಳನ್ನಾವಲಂಬಿಸಿದೆ. ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಯಾವ ದೇಶಕ್ಕೆ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸ್ವರ್ಗದವರು ಧರೆಗಿಳಿದಾಗ', ತಳಗವಾದಿ ಪ್ರಕಾಶನ, ೨೦೦೫, ಪುಟ. ೫೯.

೨. ಅದೇ, ಪುಟ. ೫೯.

ಹೋದರೂ ಇಂಥ ಬೋರ್ಡುಗಳನ್ನು ಕಾಣುವುದಿಲ್ಲ. ಸರ್ವವ್ಯವಹಾರಗಳಿಗೂ ಅವರವರ ಭಾಷೆಯನ್ನು ಬಳಸುವುದರಿಂದ, ಅದರ ಅಭಿವೃದ್ಧಿ ತಾನಾಗಿಯೇ ಆಗುತ್ತದೆಯಲ್ಲವೇ' ಎಂದು ಷೇಕ್ಸ್‌ಪಿಯರ್ ಕೇಳಿದಾಗ "ದೇಶ ಸ್ವತಂತ್ರವಾಗಿ ಕೇವಲ ಅರ್ಧಶತಮಾನವಾಗಿದೆ. ನಮ್ಮ ಜನರ ದಾಸ್ಯಬುದ್ಧಿ ಇನ್ನೂ ತೊಲಗಿಲ್ಲ. ಸ್ವಾತಂತ್ರ್ಯದ ಅಮಲಿನಲ್ಲಿ ಆಲೋಚನಾ ಸಾಮರ್ಥ್ಯಕ್ಕೆ, ನಿರಂಕುಶಮತಿತ್ವಕ್ಕೆ ತಿಲಾಂಜಲಿ ನೀಡಿದ್ದಾರೆ"[೧] ಎಂದು ವಿವರಿಸುತ್ತಾರೆ.

ವಿಧಾನಸೌಧದಲ್ಲಿ ಕನ್ನಡಕ್ಕೆ ಆದ್ಯತೆ ಸಲ್ಲುವುದಾದರೆ, ಪ್ರಾಧಿಕಾರಗಳನ್ನು ಮುಚ್ಚಬಹುದೆಂದು, 'ಉದ್ಯೋಗಾರ್ಥಿಗಳಾಗಿ ಬಂದ ಜನ ಕಡ್ಡಾಯವಾಗಿ ಕನ್ನಡ ಕಲಿಯಬೇಕು; ಕಲಿಯದಿದ್ದರೆ ನೌಕರಿ ಕೊಡಬೇಕಾಗಿಲ್ಲ'.

"ಬಂಗಾಳದಲ್ಲಿ ಮತ್ತು ತಮಿಳುನಾಡಿನಲ್ಲಿ ಕೇಂದ್ರದ ಬೇಳೆ ಬೇಯುವುದಿಲ್ಲ. ಅಲ್ಲಿಯ ಭಾಷಾ ಅಲ್ಪಸಂಖ್ಯಾತರು ತಮ್ಮ ಮನೆ ಮಾತನ್ನು ಮರೆತು, ಬಂಗಾಳಿ ತಮಿಳುಗಳಲ್ಲಿ ಎಲ್ಲ ವ್ಯವಹಾರ ನಡೆಸುತ್ತಾರೆ. ನಿಜಕ್ಕೂ ಕನ್ನಡಿಗರ ಬಗ್ಗೆ ನನಗೆ ಕನಿಕರವಾಗುತ್ತಿದೆ. ಉತ್ತರದವರೇನಾದರೂ ದಕ್ಷಿಣದವರ ಮೇಲೆ ಹಿಂದಿಯನ್ನು ಹೇರುವುದಾದರೆ ದೇಶ ಛಿದ್ರವಾಗುತ್ತದೆ. ಬಾಂಗ್ಲಾದೇಶ ಪಾಕಿಸ್ತಾನದಿಂದ ಸಿಡಿದದ್ದೇ ಈ ಕಾರಣಕ್ಕಾಗಿ"[೨] ಎಂದು ರವೀಂದ್ರರು ನುಡಿಯುತ್ತಾರೆ. ಇದನ್ನು ನೋಡಿದರೆ ಜಯದೇವಿತಾಯಿ ಲಿಗಾಡೆಯವರು ಮಂಡ್ಯದಲ್ಲಿ ನಡೆದ ೪೮ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಮೊದಲ ಮಹಿಳಾ ಅಧ್ಯಕ್ಷ ಭಾಷಣ ವಹಿಸಿ ಮಾತನಾಡುತ್ತಾ ಪರಭಾಷಿಕರು ಕನ್ನಡ ನಾಡಿನಲ್ಲಿ ನೆಲೆಯೂರಿ ನಿಂತಾಗ ಈ ನೆಲದ ಭಾಷೆಯನ್ನು ಕಲಿತು ಕನ್ನಡಿಗರೊಂದಿಗೆ ಸೌಹಾರ್ದಯುತವಾಗಿ ಬದುಕಲಿ ಎನ್ನುವುದು ನೆನಪಿಗೆ ಬರುತ್ತದೆ.

ಸಂಸ್ಕೃತ ಮೊದಲಾದ ನೆರೆಹೊರೆಯ ಭಾಷೆಗಳ ಜತೆಗೆ ವಿದೇಶಿ ಭಾಷೆಗಳನ್ನು ಕಲಿಯುತ್ತಾರೆ. ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಗಳ ಸಮ್ಮಿಲನವನ್ನು ಕಾಣಬಹುದು. "ಕರ್ನಾಟಕ ಹಿಂದೆ ಬೀಳಲು ಏನು ಕಾರಣ ಗೊತ್ತೆ? ಈಗ ಅಂದಿನ ವೀರರಿಲ್ಲ. ಶೂರರಿಲ್ಲ. ಸುಭಟರಿಲ್ಲ, ಧೀರರಿಲ್ಲ, ಧೀಮಂತರಿಲ್ಲ, ಎಲ್ಲರೂ ಪುಕ್ಕಲರು. ಮೇಲಾಗಿ ಅವರಲ್ಲಿ ಐಕ್ಯಮತ್ಯವಿಲ್ಲ. ಕನ್ನಡಿಗರ ಅನೈಕ್ಯತೆಯನ್ನು

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸ್ವರ್ಗದವರು ಧರೆಗಿಳಿದಾಗ', ತಳಗವಾದಿ ಪ್ರಕಾಶನ, ೨೦೦೫, ಪುಟ. ೬೧.
೨. ಅದೇ, ಪುಟ. ೬೨.

ಉತ್ತರದ ನಾಯಕರು ತಮ್ಮ ಪ್ರತಿಷ್ಠೆಗಾಗಿ ಬಳಸಿಕೊಳ್ಳುತ್ತಾರೆ"[೧] ಎಂದು ಗುಡುಗುತ್ತಾರೆ.

ಬಿ.ಎಂ.ಶ್ರೀ. ಅನಕ್ಕ ಕೊಡುವ ಉತ್ತರಗಳು ದೇಜಗೌ ಅವರ ಉತ್ತರಗಳಾಗಿ ಅಪ್ಪಟ ಕನ್ನಡಾಭಿಮಾನದ ದ್ಯೋತಕಗಳಾಗಿ ಗೋಚರವಾಗುವುದು ವಿಶೇಷ ಸಂಗತಿ. ಬಂಗಾಳಿ, ತಮಿಳು ಭಾಷಿಕರಿಗಿರುವಂತೆ ಕನ್ನಡಿಗರಿಗೆ ಭಾಷಾಭಿಮಾನವಿಲ್ಲ ಎನ್ನುತ್ತಾರೆ. ಇಲ್ಲಿ ದೇಜಗೌ ಅವರ ಕನ್ನಡದ ಬಗೆಗಿನ ಅಭಿಮಾನ ಹಾಗೂ ಅದರ ಬಗೆಗಿನ ಕಳಕಳಿಯನ್ನು ಗುರುತಿಸಬಹುದು. ಸೃಜನನೆಲೆಯೊಂದರಲ್ಲಿ ಸಾಹಿತ್ಯದ ಸಂವಾದ ನಡೆಸುವ ಆ ಮೂಲಕ ಭಾಷಾಭಿಮಾನವನ್ನು ಪ್ರಕಟಪಡಿಸುವ ಅಪರೂಪದ ಕತೆಯಿದು. ಇಂಥ ಕಲೆಗಾರಿಕೆ ಕನ್ನಡಪರ ಚಿಂತನೆಯಲ್ಲಿ ಸದಾ ತೊಡಗುತ್ತ ಬಂದ ದೇಜಗೌ ಅವರಂಥ ಬರಹಗಾರರಿಗೆ ಮಾತ್ರ ಸಿದ್ಧಿಸುವಂಥದ್ದು.

**ಅಜ್ಞಾತ ಸತ್ಯಾರಾಧಕ:** ಈ ಕತೆಯು ಪ್ರಾಮಾಣಿಕ ಅಧಿಕಾರಿ ವೆಂಕಟರಾಮಯ್ಯನವರ ವ್ಯಕ್ತಿತ್ವ ಹಾಗೂ ಭ್ರಷ್ಟ ವ್ಯವಸ್ಥೆಯ ವಿವಿಧ ಮುಖಗಳ ಚಿತ್ರಣ ಈ ಎರಡೂ ಅಭಿವ್ಯಕ್ತವಾಗಿವೆ.

ವೆಂಕಟರಾಮಯ್ಯ ಸಬ್‌ರಿಜಿಸ್ಟ್ರಾರ್ ಆಗಿ ಆಡಳಿತ ತರಬೇತಿ ಕಾಲೇಜಿನಲ್ಲಿ ಮೂರು ತಿಂಗಳು ತರಬೇತಿ ಪೂರೈಸಿದ ನಂತರ ಸಿಂಗಪಟ್ಟಣಕ್ಕೆ ಹೋಗಿ ಅಧಿಕಾರವಹಿಸಿಕೊಳ್ಳುತ್ತಾನೆ. ಅಲ್ಲೊಂದು ಸಣ್ಣಮನೆಯೊಂದನ್ನು ಬಾಡಿಗೆಗೆ ತೆಗೆದುಕೊಳ್ಳುತ್ತಾನೆ. ಗುಮಾಸ್ತ ಸುಬ್ಬಣ್ಣ ನಿಮ್ಮ ಯೋಗ್ಯತೆಗೆ ಈ ಸಣ್ಣ ಮನೆ ಸಾಕೆ ಹಿಂದೆ ಸಾಹೇಬರಾ ೧೬ ದೊಡ್ಡ ಅಂಕಣದ ಮನೆಯಲ್ಲಿದ್ದರು ಎಂದಾಗ 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು' ನನ್ನ ತಂದೆ ತಾಯಿ, ಅಣ್ಣತಂಗಿಯರು ಮೂರಂಕಣದ ಹೆಂಚಿನ ಮನೆಯಲ್ಲಿದ್ದಾರೆ. ಅವರಿಗೂ ನಾನು ಸಹಾಯ ಮಾಡಬೇಕೆಂದು ಹೇಳುತ್ತಾನೆ. ಇಲ್ಲಿ ವೆಂಕಟರಾಮಯ್ಯ ಸಬ್‌ರಿಜಿಸ್ಟರ್‌ರಾದರೂ ಆಡಂಬರವಿಲ್ಲದನ್ನು ಗುರುತಿಸಬಹುದು.

ವೆಂಕಟರಾಮಯ್ಯ ಅತ್ತೆಮಾವ ತಿಮ್ಮಯ್ಯ ಮತ್ತು ಅತ್ತೆ ಗಂಗಮ್ಮ ತಮ್ಮ ಮಗಳು ಇತರರ ಹಾಗೆ ವೈಭವದಿಂದಿರಬೇಕೆಂದು ಎಲ್ಲಾ ಸಾಮಾನುಗಳನ್ನು ಅಳಿಯನ ಮನೆಗೆ ತರುತ್ತಾರೆ. ಆದರೆ ಮನೆಚಿಕ್ಕದಾಗಿರುವುದರಿಂದ ಉಳಿದ ಸಾಮಾನುಗಳನ್ನು ಹಿಂದಿರುಗಿಸುತ್ತಾರೆ.

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸ್ವರ್ಗದವರು ಧರೆಗಿಳಿದಾಗ', ತಳಗವಾದಿ ಪ್ರಕಾಶನ, ೨೦೦೫, ಪುಟ. ೬೩.

ತಿಮ್ಮಯ್ಯ ವೆಂಕಟರಾಮಯ್ಯನನ್ನು ಕುರಿತು "ಸೃಷ್ಟಿಯಲ್ಲಿ ಮಾನವ ಜನ್ಮವೇ ಶ್ರೇಷ್ಠವಾದದ್ದೆಂದು ಸನ್ಯಾಸಿಗಳು ಸಂಸಾರಿಗಳೆಲ್ಲರೂ ಹೇಳುತ್ತಾರೆ. ಆದರೆ ಅದು ಸ್ಥಿರವಲ್ಲ. ಇದ್ದಷ್ಟು ದಿನ ಲಭ್ಯವಿರುವ ಅನುಕೂಲಗಳನ್ನು ಬಳಸಿಕೊಂಡು ಚೆನ್ನಾಗಿ ಬದುಕಬೇಕಾದ್ದು ಮಾನವನ ಕರ್ತವ್ಯ. ತಾವಾಗಿಯೇ ನಂನಮ್ಮ ಪಾಲಿಗೆ ಬಂದ ಸುಖ, ಸೌಕರ್ಯಗಳನ್ನು ಬಳಸಿಕೊಂಡು ಚೆನ್ನಾಗಿ ಬದುಕದಿದ್ದರೆ, ದೇವರೇ ದಯಪಾಲಿಸಿದ ಅವಕಾಶಗಳನ್ನು ಕಳೆದುಕೊಂಡದ್ದಾದರೆ ದೇವರೇ ಮೆಚ್ಚಲಾರ. ಅವಕಾಶಗಳು ಎಲ್ಲರಿಗೂ ಏಕಪ್ರಮಾಣದಲ್ಲಿ ಲಭಿಸುವುದಿಲ್ಲ. ಅವರವರ ಅದೃಷ್ಟ. ಮಾನವ ಜನ್ಮ ದೊಡ್ಡದು. ಅದು ಹಾಳುಮಾಡಬಾರದು ಅಣ್ಣಪ್ಪಗಳಿರಾ"[೧] ಎಂದು ದಾಸರು ಹೇಳಲಿಲ್ಲವೆ? ಎಂದು ದುರ್ಗಾವತಿಯನ್ನು ನೋಡಲು ನೆಂಟರಿಷ್ಟರು ಬಂದರೆ ಈ ಮನೆಯನ್ನು ಗೃಹಮಂಡಲಿಯೋ, ಕಾರ್ಪೋರೇಷನ್ನು ಕಟ್ಟಿಸಿದ್ದಿರಬೇಕು. ಮಳೆಬಂದಾಗ ಎಲ್ಲಿ ಕುಸಿದು ಬೀಳುತ್ತದೆಂದು ಹೇಳಲಾಗುವುದಿಲ್ಲವೆನ್ನುವ ಮಾತು ಕಟ್ಟಡ ನಿರ್ಮಾಣದಲ್ಲಿಯೂ ಮೋಸ-ವಾಡುತ್ತಿರುವುದನ್ನು ಗಮನಿಸಬಹುದು. ವೆಂಕಟರಾಮಯ್ಯ "ನನಗೆ ಶೋಕಿ ಆಡಂಬರವೆಂದರಾಗದು. ಸರಳತೆಯೇ ನನ್ನ ಜೀವನ ಸೂತ್ರ. ಮುದ್ದೆ ತಿಂದವನೂ ಸಾಯುತ್ತಾನೆ. ಜಾಮೂನು ತಿಂದವನೂ ಸಾಯುತ್ತಾನೆ. ಜಾಮೂನಿಗಿಂತ ರಾಗಿ ಮುದ್ದೆಯೇ ಹೆಚ್ಚು ಆರೋಗ್ಯಕರವಾದದ್ದು. ನನ್ನ ಮೈಗೆ ರೇಷ್ಮೆಬಟ್ಟೆ ತಗುಲಿದರೆ ಅಲರ್ಜಿ. ಅತಿ ಆಸೆಗೆ ಮನಸ್ಸು ಹರಿಸದೆ, ಎಟುಕದುದಕ್ಕೆ ಗೋಣುಚಾಚದೆ, ಬಡವರನ್ನು ನೋಯಿಸದೆ, ಸುಲಿಗೆಗೆ ಕಾತರಿಸದೆ, ನಮ್ಮ ಪಾಲಿಗೆ ಬಂದದ್ದನ್ನು ಪಂಚಾಮೃತವೆಂದು ತೃಪ್ತಿಪಟ್ಟುಕೊಂಡದ್ದೇ ಆದರೆ ನಾವು ದೇವರಿಗೆ ಪ್ರಿಯರಾಗುತ್ತೇವೆಂಬುದೇ ನನ್ನ ನಂಬುಗೆ' ಎಂದು ವೆಂಕಟರಾಮಯ್ಯ ಅತ್ಯಂತ ಸೌಜನ್ಯದಿಂದ ವಿನಂತಿಸಿಕೊಳ್ಳುತ್ತಾನೆ"[೨].

ತಿಮ್ಮಯ್ಯನಿಗೆ ಸುಬ್ಬಣ್ಣನ ಪರಿಚಯವಾಗುತ್ತದೆ. ನಿಮ್ಮ ಮಗಳು ಚುರುಕಾಗಿದ್ದರೆ ಸಾಕು ನಿಮ್ಮ ಅಳಿಯ ನನ್ನ ಬದಲಾಯಿಸುತ್ತೇನೆಂದು ಆಶ್ವಾಸನೆ ನೀಡುತ್ತಾನೆ. ತಿಮ್ಮಯ್ಯ ಗಂಗಮ್ಮರು ಬಡತನದಿಂದ ಬಂದವರು. ನನ್ನ ಮಗಳು ಕಷ್ಟ ಅನುಭವಿಸಬಾರದೆಂದುಕೊಂಡೆವು. ಆದರೆ ನಮ್ಮೆಲ್ಲ ಸಂಕಟಗಳಿಗೆ ಕಾರಣ "ಜಾತಿಭೂತವನ್ನು ಅಸ್ಪೃಶ್ಯತೆಯನ್ನು ಸೃಷ್ಟಿಸಿದ ಪಾಪಿಗಳು! ಈ ದೇಶದಲ್ಲಿ ನಮ್ಮಂತೆಯೇ ಕೋಟ್ಯಂತರ ಜನ ಪರಿತಪಿಸುತ್ತಿರಬೇಕು"[೩] ಅವರು ಅಂತರ್ಮುಖಿ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸ್ವರ್ಗದವರು ಧರೆಗಿಳಿದಾಗ', ತಳಗವಾದಿ ಪ್ರಕಾಶನ, ೨೦೦೫, ಪುಟ. ೬೯.

೨. ಅದೇ, ಪುಟ. ೭೦.

೩. ಅದೇ, ಪುಟ. ೭೨.

ಎಂದು ನನ್ನ ಗೆಳೆಯ ಹೇಳಿದ ಮಾತು ನೆನಪಾಗುತ್ತದೆ. ಬಸವೇಶ್ವರ, ವಿವೇಕಾನಂದ, ಗಾಂಧಿ, ಅಂಬೇಡ್ಕರರ ದಾರಿಯಲ್ಲಿ ಹೋಗಬೇಕು ಎಂದು ಹೇಳುತ್ತಾನೆ. ತಾಯಿತಂದೆಯರಿಬ್ಬರೂ ಮಗಳಿಗೆ ಧೈರ್ಯಹೇಳಿ ಹೊರಡುತ್ತಾರೆ. ದುರ್ಗಾವತಿಯೊಂದಿಗೆ ತಾನು ಪಟ್ಟ ಕಷ್ಟವನ್ನೆಲ್ಲ ಹೇಳಿಕೊಳ್ಳುತ್ತಾನೆ. ಅಕ್ಕಪಕ್ಕದವರೂ ದುರ್ಗಾವತಿಯೊಂದಿಗೆ ಸವರ್ಣಿಯರಾದ್ದರಿಂದ ಹೊರಗೆ ನಿಂತು ಮಾತನಾಡುತ್ತಾರೆ. ಇಲ್ಲಿಯೂ ಜಾತಿಸಮಸ್ಯೆಯನ್ನು ನೋಡಬಹುದು.

ಸುಬ್ಬಣ್ಣ ವೆಂಕಟರಾಮಯ್ಯನವರ ಕುಟುಂಬಕ್ಕೆ ತಾನೇ ದುಡ್ಡುಕೊಟ್ಟು ಬರುವುದಾಗಿ ಅಲ್ಲಿ ಭೂಮಿಕೊಳ್ಳುವಂತೆ ಮಾಡಿ, ನೂರಿನ್ನೂರು ರೂಪಾಯಿ ಕೊಟ್ಟು ನಾನು ಹಣಕೊಟ್ಟ ವಿಷಯ ಯಾರಿಗೂ ಹೇಳಬಾರದೆಂದು ಹೇಳುವುದು. ವೆಂಕಟರಾಮಯ್ಯ ವಾಯು ಸಂಚಾರಕ್ಕೆ ಹೋದಾಗ, ದುರ್ಗಾವತಿಯೊಡನೆ ಕಚೇರಿಯ ವಿಷಯಗಳನ್ನೆಲ್ಲ ಹೇಳುತ್ತಾನೆ. ದೂರವಾಣಿಯನ್ನು ಹಾಕಿಸಿಕೊಡುತ್ತಾನೆ.

ಅದೇ ಊರಿನ ಶಾಸಕ ಪಾಪೇಗೌಡ ಮತ್ತು ಅವನ ಗುಮಾಸ್ತ ರಂಗಯ್ಯ ವೆಂಕಟರಾಮಯ್ಯನ ಮನೆಗೆ ಬಂದು ಕಪ್ಪಕಾಣಿಕೆ ಕೊಡಬೇಕೆಂದಾಗ ಅವರೇ ಕಚೇರಿಗೆ ಬಂದು ಮಾತನಾಡಲಿ ಎಂದು ಹೇಳುತ್ತಾನೆ. ಆದರೆ ವೆಂಕಟರಾಮಯ್ಯ, ಸುಬ್ಬಣ್ಣ ಇವರಿಬ್ಬರು ಪಾಪೇಗೌಡನ ಮನೆಗೆ ಹೋಗುತ್ತಾರೆ. ಅಲ್ಲಿ ತಾಲ್ಲೂಕಿನ ಅಧಿಕಾರಿಗಳು ಹಿಂಬಾಲಕರು ಸ್ತ್ರೀಯರು ತುಂಬಿದ್ದು ಮಧ್ಯದಲ್ಲಿ ಪಾಪೇಗೌಡನು ಕುಳಿತಿದಿದ್ದುಅಲ್ಲಿ ನಡೆಯುತ್ತಿದ್ದ ಊಳಿಗವನ್ನು ನೋಡಿ ಒಳಗೊಳಗೆ ಕುದಿಯುತ್ತಾನೆ. ಪಾಪೇಗೌಡ ತಾನೇ ಸರ್ಕಾರವೆನ್ನುವಂತೆ, ತಾಲ್ಲೋಕಿನ ಸರ್ವಾಧಿಕಾರಿಯೆನ್ನುವಂತೆ ಕೂತಿರುತ್ತಾನೆ. ಅಧಿಕಾರಿಗಳು ಒಬ್ಬೊಬ್ಬರಾಗಿ ನೋಟಿನ ಕಂತೆಗಳನ್ನು ಶಾಸಕರ ಮುಂದೆ ಇಡುತ್ತಾರೆ. ವೆಂಕಟರಾಮಯ್ಯ ನೀಡಿಲ್ಲವೆಂದಾಗ ನಿಮ್ಮ ಸಹೋದ್ಯೋಗಿಗಳೆಲ್ಲರೂ ನೀಡುತ್ತಿರುವಾಗ ನೀವು ಸತ್ಯ ಹರಿಶ್ಚಂದ್ರನಂತೆ ಮಾತಾಡುವುದು ಸರಿಯಲ್ಲ ಎನ್ನುತ್ತಾನೆ. ಉಳಿದ ಅಧಿಕಾರಿಗಳು ವೆಂಕಟರಾಮಯ್ಯನನ್ನು ಕುರಿತು ಈಗಿನ ಪರಿಸ್ಥಿತಿಯೇ ಅಂಥದು. ಶಾಸಕರಿಗೆ ಅಷ್ಟೋ ಇಷ್ಟೋ ಹಣ ನೀಡುವುದು, ಇಲ್ಲ ನೌಕರಿಗೆ ರಾಜೀನಾಮೆ ನೀಡುವುದೆಂದು. ಇದಕ್ಕೆಲ್ಲ ಸುಬ್ಬಣ್ಣನಿಗೆ ವಹಿಸಿ ಅವನು ನೋಡಿಕೊಳ್ಳುತ್ತಾರೆಂದು ಹೇಳುತ್ತಾನೆ. ವಿಷಯವೆಲ್ಲ ದುರ್ಗಾವತಿಗೆ ವಿವರಿಸುತ್ತಾನೆ. ವೆಂಕಟರಾಮಯ್ಯ ವರ್ಗಾವಣೆಗೆ ಸಿದ್ಧವೇ ಹೊರತು ಲಂಚಕ್ಕೆ ಕೈಯೊಡ್ಡುವುದಿಲ್ಲ. ಪಾಪೇಗೌಡ ಈತನಿದ್ದರೆ ತನ್ನ ದೊಡ್ಡ ತಲೆನೋವೆಂದುಕೊಂಡು ಮುಖ್ಯಮಂತ್ರಿಯ ಸಹಾಯದಿಂದ ಕಾಡು ದೇವರ ಕೋಟೆಗೆ ಅವನನ್ನು ಕಳುಹಿಸುವುದೆಂದು ತೀರ್ಮಾನಿಸುತ್ತಾರೆ. ವಿಷಯ ತಿಳಿದ ಅತ್ತೆಮಾವ ಬರುತ್ತಾರೆ. ದುರ್ಗಾಳನ್ನು

ಕರೆದೊಯ್ಯಿರಿ ಎಂದಾಗ ದುರ್ಗಾ ಬೇಸಿಗೆಯಲ್ಲಿ ಮಲೇರಿಯಾ ಕಾಟ, ಮಳೆಗಾಲದಲ್ಲಿ ಊಫ್ತಿಗಳ ಕಾಟ. ಹಗಲಿರುಳು ಕಾಡುಮೃಗಗಳ ಕಾಟ. ನೀರು ಬಗ್ಗುವುದಿಲ್ಲ. ರಜೆ ಹಾಕಿ ಊರಿಗೆ ಬನ್ನಿ ಎನ್ನುತ್ತಾಳೆ. ನೀನೇನೂ ಯೋಚಿಸಬೇಡವೆಂದು ಸಮಾಧಾನಮಾಡುತ್ತಾನೆ.

ದೇವರ ಕೋಟೆಗೆ ಹೋದರೂ ಅಲ್ಲಿಯೂ ಲಂಚಗುಳಿತನವೇ. ಗುಮಾಸ್ತನನ್ನು ಕರೆದು ಅನ್ಯಾಯದ ಕಾಸಿಗೆ ಕೈಯೊಡ್ಡಬಾರದೆಂದೂ ತಿಳಿಸುತ್ತಾನೆ. ಇದಕ್ಕೆ ಒಂದು ತಿಂಗಳ ಗಡುವನ್ನು ನೀಡುವರು. ಅವರು ತಮ್ಮ ಚಾಳಿಯನ್ನು ಬಿಡುವುದಿಲ್ಲ. ತಮಗೆ ಬರಬೇಕಾದ ಹಣ ಕೈಸೇರದಿದ್ದಾಗ ಎಲ್ಲ ಕೆಲಸಗಳನ್ನು ನಿಧಾನಮಾಡುತ್ತಾರೆ. ತಿಂಗಳು, ವರ್ಷಗಳು ಕಳೆದರೂ ಪತ್ರಗಳು ಸಿಗದಿದ್ದಾಗ ಜನರೆಲ್ಲ ಸಬ್‌ರಿಜಿಸ್ಟ್ರಾರ್ ಕಚೇರಿಯ ಮುಂದೆ ಧರಣಿ ಹೂಡುತ್ತಾರೆ. ಅದೇ ಸಮಯಕ್ಕೆ ಸರ್ಕಾರಕ್ಕೆ ದೂರು ನೀಡುತ್ತಾರೆ. ಇದರ ಬಗ್ಗೆ ವರದಿ ಕಳಿಸುವಂತೆ ಸಂಬಂಧಪಟ್ಟ ಮಂತ್ರಿ ನೋಂದಾವಣಿ ಆಯುಕ್ತರಿಗೆ ಆಜ್ಞೆಮಾಡುತ್ತಾರೆ. ಆಯುಕ್ತ ನವನೀಂತರಾಜು ಕಛೇರಿಗೆ ಭೇಟಿನೀಡಿ ಎಲ್ಲರನ್ನು ವಿಚಾರಿಸುತ್ತಾರೆ. ವೆಂಕಟರಾಮಯ್ಯ ಭ್ರಷ್ಟಚಾರದ ವಿರುದ್ಧವಾಗಿ ಕೈಕೊಂಡ ಕಾರ್ಯಕ್ರಮಗಳನ್ನೆಲ್ಲ ಹೇಳುತ್ತಾನೆ. ಅದನ್ನು ಕೇಳುವ ತಾಳ್ಮೆ ಇಲ್ಲದೆ, ನಿನ್ನ ವಿರುದ್ಧ ಕಚೇರಿಯಲ್ಲಿ ಸರಿಯಾಗಿ ಕೆಲಸವಾಗುತ್ತಿಲ್ಲವೆಂದು ಹಳ್ಳಿಯ ಬಡವರಿಗೆ ತೊಂದರೆಯಾಗುತ್ತಿದೆ. ನಿನ್ನ ಸಹೋದ್ಯೋಗಿಗಳ ಜೊತೆಯಲ್ಲಿ ಸರಿಯಾಗಿ ವರ್ತಿಸುವುದಿಲ್ಲವೆಂದು ರುಜುವಾಗಿದೆಯೆಂದು ಮುಚ್ಚಳಿಕೆ ಬರೆದು ಕೊಡಬೇಕೆಂದಾಗ ಇಲ್ಲ ಸಸ್ಪೆಂಡ್ ಮಾಡುತ್ತೇನೆಂದು ಹೇಳಿದಾಗ ಸತ್ಯವಂತರಿಗಿದು ಕಾಲವಲ್ಲವೆಂದು ಇಂಥ ದುಷ್ಟವಾತಾವರಣದಲ್ಲಿ ಬದುಕುವುದು ಕಷ್ಟವೆಂದು ನಿರ್ಧರಿಸಿ ಹೆಂಡತಿ, ಮಗು, ತಂದೆತಾಯಿಯರನ್ನು ಮಾತನಾಡಿಸಿ ಬಹುದೂರ ಹೋಗುತ್ತಾನೆ. ಪ್ರಾಮಾಣಿಕರನ್ನು ಅಪ್ರಾಮಾಣಿಕರನ್ನಾಗಿಸುವ ಪ್ರಯತ್ನವೇ ಜಾಸ್ತಿಯಾಗಿರುವ ಸಂದರ್ಭದಲ್ಲಿ 'ಸತ್ಯವಂತರಿಗಿದು ಕಾಲವಲ್ಲ' ಎಂಬುದನ್ನು ದೃಢಪಡಿಸುತ್ತದೆ.

**ಸತ್ಯವಂತರಿಗಿದು ಕಾಲವಲ್ಲ:** ಹಿಂದಿನ ಕತೆ ಮತ್ತು ಈ ಕತೆಯ ಒಳ ವಿವರಗಳಲ್ಲಿ ಸಂಬಂಧವಿರುವುದನ್ನು ಕಾಣಬಹುದು. ಅಲ್ಲದೇ ಒಂದೇ ಸಮಸ್ಯೆಯ ವಿವಿಧ ಮುಖಗಳನ್ನು ಗುರುತಿಸಲು ದೇಜಗೌ ಪ್ರಯತ್ನಿಸಿದಂತಿದೆ. ಹೊಂಬಯ್ಯ ಪ್ರಥಮದರ್ಜೆ ಗುಮಾಸ್ತನಾಗಿ, ಹಂತಹಂತವಾಗಿ ಮೇಲೇರುತ್ತ ಕಲ್ಯಾಣನಗರಿಯ ಮಹಾಪಾಲಿಕೆಯ ಆಯುಕ್ತರಾಗುತ್ತಾರೆ. ಹೊಂಬಯ್ಯನವರ ಹೆಂಡತಿ ಜಯಲಕ್ಷ್ಮಿ ಗಂಡನ ಪರೋಪಕಾರ ಬುದ್ಧಿ, ಸಜ್ಜನಿಕೆ, ಪ್ರಾಮಾಣಿಕತೆ, ಜನಪ್ರಿಯತೆಗಳಿಂದಾಗಿ ಅವರ ಬಗ್ಗೆ ಹೆಮ್ಮೆ ಇದೆ. ಮೇಯರಾದರೆ ಇಬ್ಬರು ಮಕ್ಕಳಿಗೆ ಎರಡು ಸೈಟು

ಮಾಡಬೇಕೆಂದು ಹೇಳುತ್ತಾಳೆ. ಹೊಂಬಯ್ಯ ನೆಂಟರಿಷ್ಟರ ಮಕ್ಕಳನ್ನು ತಾನೇ ಇಟ್ಟುಕೊಂಡು ಓದಿಸುತ್ತಿರುತ್ತಾರೆ. ಜಯಲಕ್ಷ್ಮಿ ಹತ್ತು-ಹನ್ನೆರಡು ಮಂದಿ ಹುಡುಗರನ್ನು ಸಂಭಾಳಿಸುತ್ತಿರುತ್ತಾರೆ. ಸೈಟು ಬೇಕೆಂದಾಗ ಮಕ್ಕಳನ್ನು ಚೆನ್ನಾಗಿ ಓದಿಸಿದರೆ ಅವರೆ ಮಾಡಿಕೊಳ್ಳುತ್ತಾರೆಂದು ಹೇಳುವುದು. ಸೈಟುಗಳ ಮೇಲೆ ಕಣ್ಣಿಟ್ಟಿದ್ದ ನೆಂಟರಿಷ್ಟರು ಇಲ್ಲ ಎನಿಸಿಕೊಂಡು ಅವನು ಸ್ವಾರ್ಥಿ ಪರೋಪಕಾರಮಾಡುವವನಲ್ಲ ಎಂದೆಲ್ಲ ಶಪಿಸುತ್ತಾರೆ.

ಇವರಿಗೆ ಆಗದವರು ಪತ್ರಿಕೆಗಳಲ್ಲಿ ಹೆಂಡತಿ ಮತ್ತು ಮಕ್ಕಳ ಹೆಸರಿನಲ್ಲಿ ಹಣಗಳಿಸುತ್ತಿದ್ದಾರೆಂದು ಬೇರೆ ಊರಿನಲ್ಲಿ ಆಸ್ತಿ ಮಾಡಿದ್ದಾರೆಂದು. ಬೇರೊಂದು ಹೆಣ್ಣಿನ ಸಹವಾಸವಿದೆ ಎಂದು ಬರೆಸುತ್ತಾರೆ. ಆದರೂ ಎಂದಿನಂತೆ ಭ್ರಷ್ಟಾಚಾರ ನಿರ್ಮೂಲನ ಕಾರ್ಯದಲ್ಲಿ ತೊಡಗುತ್ತಾರೆ. ಅವನ ಪ್ರಾಮಾಣಿಕತೆಗೆ ಮುಖ್ಯಮಂತ್ರಿಗಳಿಂದ ತನ್ನ ಮಡದಿ ಮಕ್ಕಳಿಂದ ಬೆಂಬಲ ದೊರೆಯುತ್ತದೆ.

ಒಮ್ಮೆ ಮೇಯರ್ ತಮ್ಮ ಮಗನ ಮದುವೆಯನ್ನು ಅದ್ದೂರಿಯಿಂದ ನಡೆಸಿದ್ದು ಅದಕ್ಕೆ ಮಂತ್ರಿಗಳು, ವರ್ತಕರು, ಕಂತ್ರಾಟುದಾರರು ಒಂದೊಂದು ಬಾಬ್ತನ್ನು ವಹಿಸಿಕೊಂಡಿದ್ದರೆಂದು ತಿಳಿದುಬರುತ್ತದೆ. ಇದಕ್ಕೆಲ್ಲ ತಲೆಕೆಡಿಸಿಕೊಂಡು ಆರೋಗ್ಯ ಹಾಳುಮಾಡಿಕೊಳ್ಳಬೇಡಿ. ಮಕ್ಕಳೂ ಹೇಳುತ್ತಾರೆ. ಆಗ ನನ್ನ ಮುಂದೆಯೇ ಹಗಲು ದರೋಡೆ ನಡೆಯುತ್ತಿದೆ ನೋಡಿ ಹೇಗಿರಲಿ. ನನ್ನ ತಂದೆ ಹೇಳಿದ್ದರು; "ದೇವರನ್ನು ನಂಬು, ಸತ್ಯವನ್ನು ಬಿಡಬೇಡ, ಅನ್ಯಾಯಕ್ಕೆಳಸ-ಬೇಡವೆಂದು ಈ ಅನ್ಯಾಯವನ್ನು ನೋಡಿಕೊಂಡು ಸುಮ್ಮನಿರಬೇಕಲ್ಲ ಎಂಬ ಚಿಂತೆ ಪ್ರತಿಕ್ಷಣವೂ ನನ್ನನ್ನು ದಹಿಸುತ್ತದೆ"[೧] ಎಂದು ಹೊಂಬಯ್ಯ ಹೇಳುತ್ತಾರೆ. ಜಯಲಕ್ಷ್ಮಿ ಸ್ವಯಂ ನಿವೃತ್ತಿ ಪಡೆದುಕೊಳ್ಳಿ, ಮನಸ್ಸೊಪ್ಪಿದರೆ ಜನಸೇವೆಯಲ್ಲಿ ತೊಡಗಬಹುದು' ಎಂದು ಹೇಳುತ್ತಾರೆ. ಮುಖ್ಯಮಂತ್ರಿಗಳು ಈಗಿನ ರಾಜಕಾರಣಿಗಳು ಸುಳ್ಳು, ತಟವಟ, ವಂಚನೆ, ರೌಡಿತನ ಇವೆಲ್ಲ ಇರಬೇಕು. ಇಲ್ಲದಿದ್ದರೆ ಬದುಕುವುದಕ್ಕೆ ಸಾಧ್ಯವಿಲ್ಲವೆಂದು ಹೇಳುತ್ತಾರೆ. ಅಪ್ರಾಮಾಣಿಕರನ್ನು ಮಟ್ಟಹಾಕಲು ಮೇಯರ್ ಸ್ಥಾನಕ್ಕೆ ಚುನಾವಣೆಗಾಗಿ ನಿಲ್ಲಲು ಪ್ರಯತ್ನಿಸುತ್ತಾನೆ. ಮೇಯರ್ ಸ್ಥಾನಕ್ಕೆ ವಿವಿಧ ಪಕ್ಷಗಳ ಟಿಕೇಟ್ ಕೇಳುತ್ತಾರೆ. ಕೊನೆಗೆ ಯಾವ ಪಕ್ಷವೂ ಟಿಕೆಟ್ ಕೊಡದೆ ಅವರು ಸ್ವತಂತ್ರ ಅಭ್ಯರ್ಥಿಯಾಗಿ ನಿಲ್ಲುತ್ತಾನೆ. ಪ್ರಾಮಾಣಿಕನೆಂದು ಹಿಂದೆ ಮೆಚ್ಚಿಕೊಂಡಿದ್ದ ಜನತೆ ಅವನಿಗೆ ಓಟು ಹಾಕುವುದಿಲ್ಲ. ಅವರು ಗೆಲ್ಲುವುದಿಲ್ಲ. ತೀರ್ಥಯಾತ್ರೆ ಮಾಡಿಕೊಂಡು ಬರುವುದಾಗಿ ಮಡದಿ

---

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಸತ್ಯವಂತರಿಗಿದು ಕಾಲವಲ್ಲ', ತಳಗವಾದಿ ಪ್ರಕಾಶನ, ೨೦೦೫, ಪುಟ. ೬೫.

ಮಕ್ಕಳಿಗೊಪ್ಪಿಸಿ ಊರುಬಿಡುತ್ತಾರೆ. ಹಾಗಾಗಿ ಇದು 'ಸತ್ಯವಂತರಿಗಿದು ಕಾಲವಲ್ಲ'ವೆಂಬುದು ಸತ್ಯವಾಗಿಬಿಡುತ್ತದೆ.

**ಹೆಣ್ಣಿಗೆ ಹೆಣ್ಣೇ ಹಗೆ:** ಈ ಕತೆಯಲ್ಲಿ ವರಲಕ್ಷ್ಮಿ ಎಂಬ ಹೆಣ್ಣು ಬಡತನದಲ್ಲಿಯೇ ಕಷ್ಟಪಟ್ಟು ವ್ಯಾಸಂಗ ನಡೆಸಿ ಸಂಶೋಧನೆ ಮುಗಿಸುವವರೆಗಿನ ಕತೆ. ಅನಂತರ ಅವಳು ಮದುವೆಯಾಗುವವರೆಗೂ ಹರಡಿಕೊಂಡಿದೆ. ವರಲಕ್ಷ್ಮಿ ಹೆಬ್ಬಳ್ಳದ ಕಿಟ್ಟಯ್ಯನ ಮಗಳು. ಅದು ಬಹುಜಾತಿಗಳ ಊರು, ವರಲಕ್ಷ್ಮಿ ಮಾಧ್ಯಮಿಕ ಶಾಲೆ ವಿದ್ಯಾಭ್ಯಾಸ ಮುಗಿಸಿ ಪ್ರೌಢಶಾಲೆಗೆ ಸೇರಿಸಲು ಪ್ರಯತ್ನಮಾಡುವಾಗ 'ಇವಳೇನು ಓದಿ ಮೇಡಮ್ಮ ಆಗ್ತಾಳೇನೋ, ತಹಶೀಲ್ದಾರ್‌ಲಾಗ್ತಾಳೇನೋ' ಎಂದು ಲೇವಡಿ ಮಾಡುತ್ತಾರೆ ಊರಿನ ಹೆಂಗಸರು. ಆಂಗ್ಲರ ಆಗಮನದಿಂದಾಗಿ ಶಿಕ್ಷಣ ಕ್ಷೇತ್ರಕ್ಕೆ ಅವರ ಕೊಡುಗೆ ಅಪಾರವಾದುದ್ದಾಗಿದೆ. ಬ್ರಾಹ್ಮಣ ಸ್ತ್ರೀಯರ ವಿಶ್ವವಿದ್ಯಾನಿಲಯ-ದಲ್ಲಿ ಓದುವ ಅವಕಾಶ ದೊರೆಯುತ್ತದೆ. ಬ್ರಾಹ್ಮಣ ಸ್ತ್ರೀಯರಿಗೂ ಶೂದ್ರ ಮಹಿಳೆಯರಿಗೂ ಇರುವ ವ್ಯತ್ಯಾಸವೇನಿಲ್ಲವೆಂದು ಪ್ರಶ್ನಿಸಿ ಮಗಳನ್ನು ಓದಿಸುವುದಕ್ಕೆ ಮುಂದಾಗುತ್ತಾನೆ. ಪದವಿಪೂರ್ವ ಕಾಲೇಜಿನ ಮೆಟ್ಟಲೇರುವ ಹೊತ್ತಿಗೆ ಚೂಡಿದಾರ ಎಳೆಯ ಪೀಳಿಗೆಯಲ್ಲಿ ಜನಪ್ರಿಯವಾಗುತ್ತದೆ. ಇತರ ಮಕ್ಕಳಂತೆ ಬಟ್ಟೆ ತೊಡದಿದ್ದರೆ, ಮಗಳಿಗೆ ಅಪಮಾನವಾಗುತ್ತದೆಂದು ಚಪ್ಪಲಿ, ತೆಗೆದು-ಕೊಡುತ್ತಾನೆ. ಚೂಡಿದಾರಕ್ಕೆ ಬಟ್ಟೆಕೊಂಡು, ದರ್ಜಿಗೆ ಕೊಡುತ್ತಾನೆ. ಮನೆಗೆಲಸ, ಹೊಲಗೆಲಸ ಮುಗಿಸಿಕೊಂಡು ಶಾಲೆಗೆ ದಿನಾಲು ಮೂರುಮೈಲಿ ನಡೆದುಕೊಂಡು ಹೋಗುತ್ತಿರುತ್ತಾಳೆ. ಪಿಯುಸಿಗೆ ಓದು ನಿಲ್ಲಿಸಿಬಿಟ್ಟರೆ ತಾನು ಎಡಬಿಡಂಗಿ-ಯಾಗುತ್ತೇನೆಂದು ಟಿಸಿಹೆಚ್ ಮಾಡಿಕೊಂಡರೆ, ಮುಂದೆ ಉಪಾಧ್ಯಾಯಿನಿಯಾಗ-ಬಹುದೆಂದು ತೀರ್ಮಾನಿಸಿಕೊಳ್ಳುತ್ತಾಳೆ. ಅಂಚೆದ ತೆರಪಿನ ಶಿಕ್ಷಣ ವ್ಯವಸ್ಥೆಯಲ್ಲಿ ಬಿ.ಎ. ಪರೀಕ್ಷೆಯಲ್ಲಿ ಪ್ರಥಮದರ್ಜೆ ಪಡೆದು ತೇರ್ಗಡೆಹೊಂದುತ್ತಾಳೆ. ದೂರದ ಸಂಬಂಧವೊಂದರ ಮದುವೆಗೆಂದು ತಂದೆಯೊಡನೆ ವರಲಕ್ಷ್ಮಿ ಮೈಸೂರಿಗೆ ಹೋಗಿದ್ದಾಗ ಸಹಪಾಠಿಗಳು ಸಿಕ್ಕಿ ಅವರೆಲ್ಲರೂ ಎಂ.ಎ. ತರಗತಿಗೆ ಸೇರುವುದಾಗಿ ಹೇಳುತ್ತಾರೆ. ಕಿಟ್ಟಯ್ಯ ಇನ್ನೆರಡು ವರ್ಷ ಓದಿಬಿಡು ಎಂದಾಗ ತಂದೆತಾಯಿಯರ ಬಡತನ ಮತ್ತು ಕಷ್ಟಕ್ಲೇಶಗಳು ನೆನಪಾಗುತ್ತದೆ. ಅವಳು ಓದಿಗೆ ಶರಣಾಗತಳಾಗುತ್ತಾಳೆ. ಪ್ರತಿನಿತ್ಯ ಮೈಸೂರಿಗೆ ಪಾಂಡವಪುರದಿಂದ ರೈಲಿನಲ್ಲಿ, ಬಸ್ಸಿನಲ್ಲಿ ಪ್ರಯಾಣಿಸಬೇಕಾದರೆ ಒಬ್ಬಿಬ್ಬರು ರಸಿಕ ಉಪನ್ಯಾಸಕರ ಪರಿಚಯ-ವಾಗುತ್ತದೆ. ದೀರ್ಘಕಾಲದ ಸಹವಾಸ ದೋಷದಿಂದ ಅವಳ ಸುಪ್ತಚಿತ್ತದಲ್ಲಿ ಮಲಗಿದ್ದ ಅವಳ ದೈಹಿಕ ಹಾಗೂ ಮಾನಸಿಕ ಪಾತ್ರಗಳಲ್ಲಿ ತಲ್ಲಣಗಳ ಅಲೆಗಳೇಳುತ್ತವೆ. ಆದರೂ ಆ ಭಾವನೆಗಳನ್ನು ಅದುಮಲು ಪ್ರಯತ್ನಿಸಿದಷ್ಟು ಅವು

ತೀವ್ರವಾಗುತ್ತದೆ. ಐದಿಂದ್ರಿಯಗಳೂ ಅವಳನ್ನು ಕಾಡುತ್ತವೆ. ತಂದೆ ಅವಳಿಗೊಂದು ಗಂಡುಹುಡುಕಿ ಮದುವೆಮಾಡಿ, ತಂದೆಯ ಕರ್ತವ್ಯವನ್ನು ನೆರವೇರಿಸಲಿಲ್ಲವೆಂದು-ಕೊಳ್ಳುತ್ತಾನೆ. ವರಲಕ್ಷ್ಮಿ ಬಾವಿಯಲ್ಲಿ ನೀರು ಸೇದುವಾಗ, ಧೂಳು ಬೆವರು ತುಂಬಿದ, ಉಟ್ಟಬಟ್ಟೆ ಮೈಗಂಟಿಕೊಂಡಿದ್ದು ತಲೆಕೆದರಿದ ಮಗಳನ್ನು ನೋಡಿದಾಗ ಅವನ ಕರುಳು ಕಿವಿಚಿದಂತಾಗುತ್ತದೆ. 'ಅಯ್ಯೋ ದೇವರೆ, ನನ್ನ ಈ ಚೆಲುವೆ ಮಗಳನ್ನು ಬಡತನದಲ್ಲಿ ಹುಟ್ಟಿಸುವುದಕ್ಕಿಂತ ದೊರೆಗಳ ಅರಮನೆಯಲ್ಲಿಯೋ ಶ್ರೀಮಂತರ ಸೌಧಗಳಲ್ಲಿಯೂ ಹುಟ್ಟಿಸಬಾರದಿತ್ತೆ"[೧] ಎಂದು ಹಲುಬುತ್ತಾನೆ.

ಡಿಪ್ಲೊಮೊ ಮುಗಿಸಿ, ಉದ್ಯೋಗದಲ್ಲಿದ್ದ ವರಲಕ್ಷ್ಮಿಯ ತಮ್ಮ ವರದಪ್ಪನ ಮದುವೆ ಮಾಡಬೇಕೆಂದು ವಿಷಯ ತಿಳಿಸುತ್ತಾನೆ. ಮನೆಯಲ್ಲಿ ಬೆಳೆದ ಹೆಣ್ಣುಮಗಳನ್ನಿಟ್ಟುಕೊಂಡು ಮಗನಿಗೆ ಮದುವೆ ಮಾಡುವುದು ಸರಿಯಲ್ಲವೆಂದು, ಅಕ್ಕನ ಮದುವೆ ಮಾಡುವವರೆಗೂ ಮದುವೆ ಮಾಡುವುದಿಲ್ಲವೆನ್ನುತ್ತಾನೆ. ವರಲಕ್ಷ್ಮಿ ತಂದೆಯನೊಪ್ಪಿಸುತ್ತಾಳೆ. ಭೋಗೇಗೌಡನ ಮಗಳ ಜೊತೆ ಮದುವೆ ನೆರವೇರುತ್ತದೆ. ಆದರೆ ಸೊಸೆ ಬಂದ ಮೇಲೆ ತನ್ನ ಮಗಳಿಗೇನು ಸಂಕಟವಾಗುತ್ತದೆಯೊ ಎಂದುಕೊಳ್ಳುತ್ತಾನೆ. ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣಳಾಗುತ್ತಾಳೆ. ಮೂರು ಮೈಲಿ ದೂರದಲ್ಲಿದ್ದ ಏಕೋಪಾಧ್ಯಾಯ ಶಾಲೆಯೊಂದರಲ್ಲಿ ನೇಮಕಗೊಳ್ಳುತ್ತಾಳೆ. ಎಂ.ಎ. ಪಾಸುಮಾಡಿದರೂ ಅವಳು ಶಾಲೆಯೊಂದರಲ್ಲಿ ಕೆಲಸ ನಿರ್ವಹಿಸಬೇಕಲ್ಲ ಎಂದು ಬೇಸರಗೊಳ್ಳುವುದಿಲ್ಲ. ತಂದೆ ಎಂ.ಎ. ಮಾಡಿ ಶಾಲೆಯಲ್ಲಿ ಉದ್ಯೋಗ-ಮಾಡಬೇಕು ಇಷ್ಟೆಲ್ಲ ಓದಿ ಎಂದಾಗ ನಾನು ಜ್ಞಾನಸಂಪಾದನೆಯ ದೃಷ್ಟಿಯಿಂದ ಬರಹಗಾರ್ತಿಯಾಗುವ ದೃಷ್ಟಿಯಿಂದ. ಬರಹಾರ್ತಿಯಾಗುವ ದೃಷ್ಟಿಯಿಂದ ಓದುತ್ತಿದ್ದೇನೆಯೇ ಹೊರತು ಉದ್ಯೋಗ ದೃಷ್ಟಿಯಿಂದಲ್ಲ' ಎನ್ನುತ್ತಾಳೆ. ಸಾಹಿತಿ ಧರ್ಮಪಾಲರ ಪರಿಚಯವಾಗಿ ಅದರ ಸಲಹೆಯಂತೆ ಪಿಹೆಚ್.ಡಿ. ಸಂಶೋಧನೆಗಿಳಿಯುತ್ತಾಳೆ. ಹಳ್ಳಿಯ ಬದುಕನ್ನು ಪ್ರತಿಬಿಂಬಿಸುವ ಲೇಖನಗಳನ್ನು ಬರೆಯಿಸಿ ಅವುಗಳ ಪ್ರಕಟನೆಗೂ ನೆರವು ನೀಡುತ್ತಾರೆ.

ತಮ್ಮನ ಹೆಂಡತಿ ಸುಂದರಿ. ಆಕೆಯಲ್ಲಿ ಒಂದು ರೀತಿಯ ಕೀಳರಿಮೆ. ಜೊತೆಗೆ ತನ್ನ ಗಂಡನಿಗಿಂತ ಹೆಚ್ಚಿನ ಸಂಬಳ ತರುತ್ತಾಳೆಂಬ ಹೊಟ್ಟೆಕಿಚ್ಚು ಬೇರೆ. ತಮ್ಮ ಹೆಂಡತಿಯೇ ವರಲಕ್ಷ್ಮಿಗೆ ಶಾಪವಾಗಿ ಪರಿಣಮಿಸುತ್ತಾಳೆ. 'ಹೆಣ್ಣಿಗೆ ಹೆಣ್ಣೆ ಹಗೆ' ಎಂಬಂತೆ. ಭೋಗೇಗೌಡ ಕೊಟ್ಟಮನೆಗೆ ಕೆಟ್ಟ ಹೆಸರು ಬರಬಾರದು, ಮಗಳ ಮನಸ್ಸಿಗೆ ನೋವಾಗಬಾರದು. ವರಲಕ್ಷ್ಮಿಗೊಂದು ಗಂಡು ಹುಡುಕಿ ಮದುವೆ

೧. ದೇಜಗೌ, ಜೀತ ಮತ್ತು ಇತರ ಕಥೆಗಳು : 'ಹೆಣ್ಣಿಗೆ ಹೆಣ್ಣೆ ಹಗೆ', ತಳಗವಾದಿ ಪ್ರಕಾಶನ, ೨೦೦೫, ಪುಟ. ೧೦೪.

ಮಾಡಿಸಿ, ಅವಳನ್ನು ಗಂಡನ ಮನೆಗೆ ಕಳಿಸಿದರೆ ತನ್ನ ಮಗಳಿಗೆ ಸಮಾಧಾನವಾಗುತ್ತದೆಂದು ಯೋಚಿಸಿ ತಾನೇ ಗಂಡನನ್ನು ಹುಡುಕುವುದಕ್ಕೆ ಪ್ರಯತ್ನಿಸಿ ಮೂವತ್ತು ದಾಟಿದ ಪ್ರಾಥಮಿಕ ಶಾಲೆಯ ಉಪಾಧ್ಯಾಯನೊಬ್ಬನನ್ನು ಕರೆತರುತ್ತಾನೆ. ಅಕ್ಕಂದಿರ ಒತ್ತಾಯಕ್ಕಿಂತ ಮಿಗಿಲಾಗಿ ತಂದೆತಾಯಿಯರ ಕರುಣಾರ್ದ್ರ ಸ್ಥಿತಿಯನ್ನು ನೋಡಿ ವರಲಕ್ಷ್ಮಿ ತಲೆಯಲ್ಲಾಡಿಸುತ್ತಾಳೆ. ಗಂಡಿನ ತಾಯಿ ಕಾಳಮ್ಮ ಕೆಲವು ಷರತ್ತುಗಳನ್ನೊಡ್ಡುತ್ತಾಳೆ. ನಾನು ವರದಕ್ಷಿಣೆ ಕೇಳುವುದಿಲ್ಲ. ಆದರೆ ಮದುವೆಯ ನಂತರ, ತನ್ನ ಖರ್ಚಿಗಾಗಿ ಐನೂರು ರೂಪಾಯಿ ಇರಿಸಿಕೊಂಡು ಉಳಿದ ಸಂಬಳವನ್ನು ಕೊಡಬೇಕು ಎಂದು ಹೇಳುತ್ತಾಳೆ. ವರಲಕ್ಷ್ಮಿಗೆ ಸಾಮಾಜಿಕ ನಿಂದೆ ಸಂಗತಿಯೂ, ಜೊತೆಗೆ ಕಷ್ಟಸಹಿಷ್ಣುತೆ, ಸಹನೆ, ಛಲಗಳು ಚಿಕ್ಕಂದಿನಿಂದ ಕಷ್ಟಗಳ ಪಂಜರದಲ್ಲಿ ನಿಂದೆ ಅಪಚಾರಗಳ ನಡುವೆಯೇ ಬೆಳೆದ ವರಲಕ್ಷ್ಮಿಗೆ ಬದುಕಿನ ಒಂದು ಭಾಗವಾಗಿ, ಎಂಥ ಕಷ್ಟಗಳನ್ನಾದರೂ ಎದುರಿಸುವ ಸ್ಥೈರ್ಯಹೊಂದಿರುವುದರಿಂದ ತಾಯಿತಂದೆಯರಿಗಾಗಿ ಸಂಬಂಧ-ವನ್ನೊಪ್ಪಿಕೊಳ್ಳುತ್ತಾಳೆ. ಮದುವೆಯ ಸಂದರ್ಭದಲ್ಲಿಯೇ ಹುಡುಗನ ಲೈಂಗಿಕ ಸಾಹಸಕಥೆಗಳು ಗೊತ್ತಾದರೂ ಮದುವೆಗೆ ಮುನ್ನ ಅವನೇನೇ ಆಗಿರಲಿ. ಅವನನ್ನು ದಾರಿಗೆ ತರುವ, ಬರದಿದ್ದರೆ ತನ್ನ ಪಾಡಿಗೆ ತಾನಿದ್ದುಬಿಡುವ ನಿರ್ಧಾರವನ್ನು ಕೈಗೊಳ್ಳುತ್ತಾಳೆ. ವರಲಕ್ಷ್ಮಿ ಅತ್ತೆಯ ಮನೆ ಸರ್ಪನ ಹೆಡೆಯ ನೆಳಲಲ್ಲಿದ್ದಂತೆ, ಗುಮ್ಮನ ಬಸಿರನ್ನು ಹೊಕ್ಕಂತೆ ಅವಳಿಗೆ ತೋರುತ್ತದೆ. ಇಲ್ಲಿ ಅತ್ತೆಯು ಅವಳಿಗೆ ಶತ್ರುವಾಗಿಯೇ ಕಂಡುಬರುತ್ತಾಳೆ. ತಿಂಗಳ ಸಂಬಳವನ್ನು ಕೇಳಿದಾಗ ಮದುವೆಯ ಸಾಲ ತೀರಿಸುವುದಕ್ಕೆ ಅಪ್ಪನಿಗೆ ಕೊಟ್ಟೆ, ಮುಂದಿನ ತಿಂಗಳು ತಂದುಕೊಡುತ್ತೇನೆಂದಾಗ ಎರಡು ತಿಂಗಳ ಸಂಬಳವನ್ನು ಸೇರಿಸಿ ಕೊಡಬೇಕೆಂದಾಗ ವರಲಕ್ಷ್ಮಿ ಸ್ನೇಹಿತರಿಂದ ಸಾಲ ತೆಗೆದುಕೊಡುತ್ತಾಳೆ. ಕಿಟ್ಟಯ್ಯನಿಗೆ ಬೀಗತಿಯಿಂದ ತನ್ನ ಮಗಳು ಅನುಭವಿಸುತ್ತಿದ್ದ ಕಿರುಕುಳ ಗೊತ್ತಾಗುತ್ತದೆ. ತಂದೆತಾಯಿಯರಿಗೆ ಗೊತ್ತಾದರೆ ನೊಂದರೆಂದು. ವರಲಕ್ಷ್ಮಿ ಏನನ್ನು ಹೇಳುವುದಿಲ್ಲ. ಮಗಳನ್ನು ಹುಲಿಯಬಾಯಿಗೆ ನೂಕಿದೆನಲ್ಲ ಎಂಬ ಕೊರಗಿನಲ್ಲಿ. ಒಂದು ದಿನ ಗದ್ದೆಯನ್ನುಳುತ್ತಿದ್ದಾಗ ಎದೆನೋವು ತೀವ್ರವಾಗಿ ಮರಣಹೊಂದುತ್ತಾನೆ. ಹೆಣ್ಣಿಗೆ ಹೆಣ್ಣೇ ಹಗೆಯಾಗಿ, ಆ ಹಗೆಯೇ ಅಪ್ಪನನ್ನು ಬಲಿತೆಗೆದುಕೊಂಡಿತೆಂಬುದನ್ನವಳು ಬಲ್ಲಳು. ಹೆಣ್ಣಿಗೆ ಅವಳ ಅಭಿವೃದ್ಧಿಯ ಕಡೆಗೆ ಹೆಣ್ಣೇ ಮಾರಕ ಎಂಬುದನ್ನು ಈ ಕತೆಯ ಮುಖಾಂತರ ದೃಢಪಡಿಸಲಾಗಿದೆ.

**ಇಂಥ ಅಕ್ಕತಂಗಿಯರೂ ಉಂಟೆ:** ಈ ಕತೆಯೂ ಸೀತೆ ದಮಯಂತಿ ದ್ರೌಪದಿಯರು ಪಟ್ಟಪಾಡು ಭೀಕರ ನಿಜ. ಇಂದಿನ ಮಹಿಳೆಯರ ಪಾಡು ಅದಕ್ಕಿಂತಲೂ

ಘೋರವಾದದ್ದೆಂಬುದು. ಅಕ್ಕ-ತಂಗಿಯರ ಕಾಮ-ವೈಷಮ್ಯಗಳು ಈ ಕತೆಯಿಂದ ತಿಳಿದುಬರುತ್ತದೆ.

ಒಬ್ಬ ಹೆಣ್ಣು ಮಗಳು ತನ್ನ ಳಿಲನೆಯ ವಯಸ್ಸಿನಲ್ಲಿ ಈ ಆತ್ಮಕತೆಯನ್ನು ಬರೆದಿದ್ದಾಳೆ. ತನ್ನ ಹಾಗೆ ಇತರ ಹೆಣ್ಣುಮಕ್ಕಳಿಗೆ ಬಾರದಿರಲೆಂದು. ಈಕೆ ತಾಯಿಗೆ ಮೂವರು ಮಕ್ಕಳು. ಮೊದಲಿಬ್ಬರು ಮಗಳು ಮತ್ತು ಅಣ್ಣ. ಅಣ್ಣನ ಅಡ್ರೆಸ್ ಗೊತ್ತಿಲ್ಲ. ತಾಯಿ ತನ್ನ ದೇಹವನ್ನು ಅಡವಿಟ್ಟು ಸಾಕಿರುತ್ತಾಳೆ. ಸಾಕಿದ ಮಕ್ಕಳಿಗೆ ಈ ಗತಿಯಾಯಿತೆಂದು ಮಗ ಯಾರಿಗೂ ಹೇಳದೆ ಮನೆಬಿಟ್ಟು ಮೂವತ್ತು ವರ್ಷವಾಗಿರುತ್ತದೆ. ಗಂಡ ಕುಡಿದು ಬಂದು ಗಲಾಟೆಯನ್ನಾರಂಭಿಸುವುದು. ವಿದ್ಯಾವಂತನಾದ ಮಗನನ್ನು ನೋಡುವ ಆಸೆ ಇಲ್ಲದಾಗಿ, ಕೊನೆಗೆ ಕೊರಗಿ ಶಕ್ತಿಹೀನಳಾಗಿ, ಹಲವು ರೋಗಗಳು ಅವಳು ಸಾವನ್ನಪ್ಪುತ್ತಾಳೆ.

**ಮರಿಲಿಂಗಯ್ಯನ ಏಕದಶಾವತಾರ:** ಸಮಾಜದಲ್ಲಿನ ಪುಂಡನೊಬ್ಬನನ್ನು ಕುರಿತು ಬರೆದಿರುವ ಕತೆ. ಬೆಂಗಳೂರಿನ ಕಲ್ಯಾಣನಗರಿಯ ಕುರಿದೊಡ್ಡಿ ಎನ್ನುವ ಊರು ಒಂದು. ಆ ಊರಿನ ಸಣ್ಣಕುಳ ಕುರಿಲಿಂಗೇಗೌಡ. ಆತನಿಗೆ ನಾಲ್ಕು ಜನ ಮಕ್ಕಳು. ಇಬ್ಬರು ಗಂಡು ಇಬ್ಬರು ತಂಗಿಯರು. ಎಸ್ಸೆಸ್ಸೆಲ್ಸಿಯಲ್ಲಿ ಫೇಲಾಗಿದ್ದ ಹಿರಿಯ ಮಗ ಮರಿಲಿಂಗೇಗೌಡ. ಈತನೇ ಕಥೆಯ ನಾಯಕ. ಊರಿನಲ್ಲಿದ್ದರೆ ಕುರಿಕಾಯುವುದೇ ಗತಿ ಎಂದು ತಿಳಿದು ರಾತ್ರೋರಾತ್ರಿ ಮನೆಬಿಟ್ಟು ಬಂದು ರೈಲ್ವೆಸ್ಟೇಷನ್ನಿನಲ್ಲಿ ಲಗೇಜು ಹೊರುವ ಕಾಯಕದಿಂದ ಆರಂಭಿಸಿ ದೇಶದಲ್ಲಿ ಜಾತಿ ಗೊತ್ತಾದರೆ ತೊಂದರೆಯಾಗುತ್ತದೆಂದು ಮರಿಲಿಂಗೇಗೌಡ ಹೆಸರನ್ನು ಮರಿಲಿಂಗಯ್ಯ ಎಂದು ಹೆಸರು ಬದಲಾಯಿಸಿಕೊಳ್ಳುತ್ತಾನೆ. ಕಬ್ಬನ್‌ಪೇಟೆಯ ಹೋಟೆಲ್‌ನಲ್ಲಿ ತಟ್ಟೆಲೋಟ ತೊಳೆಯುವ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಅಲ್ಲಿಗೆ ಬರುವ ತಹಶೀಲ್ದಾರ್ ಕಛೇರಿಯವರ ಪರಿಚಯದಿಂದ ಹಂಗಾಮಿ ಕ್ಲರ್ಕ್ ಹುದ್ದೆಗೆ ಸೇರುತ್ತಾನೆ. ಅಲ್ಲಿ ತನ್ನ ಕೆಲಸವನ್ನೂ ದುರುಪಯೋಗಪಡಿಸಿಕೊಂಡು ಸಣ್ಣಹಿಡುವಳಿದಾರರಿಗೆ ಭಯಹುಟ್ಟಿಸಿ ಈ ದಿನ ಬೆಲೆಗಿಂತ ಎರಡರಷ್ಟು. ಜೊತೆಗೆ ಮನೆಗೊಂದು ಸೈಟು. ಮೆನಗೊಂದು ಆಳಿಗೆ ಉದ್ಯೋಗಕೊಡಿಸುತ್ತೇನೆ. ಕೋರ್ಟು ಕಛೇರಿಗಳಿಗೆ ಅಲೆಯಿಸದೆ ನಿಮ್ಮೆಲ್ಲ ಕೆಲಸಗಳನ್ನು ನಾನೇ ನಿಭಾಯಿಸುತ್ತೇನೆ" ಎಂದು ಕಡಿಮೆ ಬೆಲೆಗೆ ಅವರ ಜಮೀನನ್ನು ವಶಪಡಿಸಿಕೊಳ್ಳುತ್ತಾನೆ. ಇಲ್ಲಿ ಸಾಕ್ಷರತೆಯ ಮಹತ್ವವನ್ನು ನೆನಪಿಸುತ್ತದೆ. ಪತ್ರದಲ್ಲಿ ಏನು ಬರೆದಿದೆಯೆಂಬುದನ್ನು ಗಮನಿಸದೆ ಅವರೆಲ್ಲರೂ ಹೆಬ್ಬೆಟ್ಟುಹಾಕಿ ಕೊಡುತ್ತಾರೆ. ಅದೆಲ್ಲವನ್ನು ಮರಿಲಿಂಗೇಗೌಡ ಕಡಿಮೆ ದುಡ್ಡು ನೀಡಿ ಹೆಚ್ಚು ಬೆಲೆಬಾಳುವ ಜಮೀನನ್ನು ವಶಪಡಿಸಿಕೊಳ್ಳುತ್ತಾನೆ.

ನಂತರ ಅಲ್ಲಿಯೇ ಒಂದು ತೋಟಮಾಡಿ ಅಲ್ಲಿ ಗೆಸ್ಟ್‌ಹೌಸ್ ಕಟ್ಟಿಸಿ ದೊಡ್ಡ ದೊಡ್ಡ ರಾಜಕಾರಣಿಗಳ ಪರಿಚಯ ಮಾಡಿಕೊಂಡು ನಂತರ ಅನ್ಯಮಾರ್ಗಗಳನ್ನು ಅನುಸರಿಸಿ ಬೆಂಗಳೂರಿನ ಶ್ರೀಮಂತರಲ್ಲೊಬ್ಬನಾಗುತ್ತಾನೆ. ಗಿರಿಜೆ ಆತನ ಕೈಹಿಡಿಯುತ್ತಾಳೆ. ತೋಟದ ಕಾವಲಿಗಾಗಿ ಹಳ್ಳಿಯಿಂದ ಇಬ್ಬರು ಅನಾಥ ಹುಡುಗರನ್ನು ಕರೆತಂದು ಅವರಿಗೆ ಮನೆಕಟ್ಟಿಸಿ ಕೊಡುತ್ತಾನೆ. ಅವರ ಮಡದಿಯರಿಗೆ ಅತಿಥಿ ಸತ್ಕಾರದ ತರಬೇತಿ ನೀಡಿ, ಹಲವು ಆಮಿಷಗಳನ್ನೊಡ್ಡಿ ಅತಿಥಿಗಳ ಸೇವೆಗೆ ಅವರನ್ನಣಿಗೊಳಿಸುತ್ತಾನೆ. ಹೆಂಡತಿ ಬಾಣಂತನದಲ್ಲಿದ್ದಾಗ ನಾದಿನಿ ಭವಾನಿಯೊಂದಿಗೆ ಸಂಬಂಧವನ್ನೊಂದುತ್ತಾನೆ. ಸಂಸಾರ ನಿರ್ವಹಣೆಯ ಭವಾನಿಗೆ ವಹಿಸಿ ಗಿರಿಜೆ ಖುಷಿಯಾಗಿ ಗಂಡನ ಜೊತೆಯಲ್ಲಿ ಓಡಾಡಿ-ಕೊಂಡಿರುತ್ತಾಳೆ.

ರಾಜಕಾರಣಿಗಳೂ ಮಠಾಧಿಪತಿಗಳೂ ಜತೆಯಾಗಿ ಆಡಳಿತ ನಡೆಸುತ್ತಿದ್ದಾರೆಂದು ಮರಿಲಿಂಗಯ್ಯನಿಗರಿವಾಗುತ್ತದೆ. ಚಂದ್ರಶೇಖರ್ ಗುಂಡಪ್ಪಗೌಡರು ನ್ಯಾಯಮೂರ್ತಿಗಳು ಕಾನೂನುಗುಳಿಗಳಾದ್ದರಿಂದ ತನ್ನ ವ್ಯವಹಾರಗಳಿಗೆ ಅಡ್ಡಿಯಾಗುತ್ತಾರೆಂದು ದೂರವಿಡುತ್ತಾನೆ. ಸ್ವಾಮಿಗಳ ಸಂಪರ್ಕಕ್ಕಾಗಿ ಶಿವಪ್ಪ ಕರಿಯಪ್ಪನನ್ನು ಹಿಡಿದರೆ ಕೆಲಸ ಸರಾಗವಾಗಿ ಫಲಿಸುತ್ತದೆ' ಎಂದು ಲಕ್ಕಣ್ಣ ಭೀಮಣ್ಣರಿಬ್ಬರೂ ಸಲಹೆ ನೀಡುತ್ತಾರೆ. ರಾಜಕಾರಣಿಗಳು ಸಂಪಾದಿಸುವ ಹಣ ಕೆಲವು ಮಠಗಳಲ್ಲಿ ಸಂಗ್ರಹಗೊಂಡು ಅವು ಶ್ರೀಮಂತವಾಗುತ್ತಿರುವ ವಾಸ್ತವಾಂಶವೂ ಗೊತ್ತಾಗಿ, ಅನೇಕ ಸ್ವಾಮಿಗಳು ವಿಷಯಲಂಪಟರೆಂಬುದೂ ಅವನಿಗೆ ಗೊತ್ತಾಗುತ್ತದೆ. ತಾನು ಕೂಡ ಅದೇ ಮಾರ್ಗವನ್ನನುಸರಿಸಬೇಕೆಂದುಕೊಳ್ಳುತ್ತಾನೆ. ಇಂದಿನ ಸಮಾಜದಲ್ಲಿಯೂ ಇಂತಹ ವ್ಯವಸ್ಥೆಯು ಕಂಡುಬರುತ್ತದೆ.

ಒಂದು ದಿನ ಮರಿಲಿಂಗಯ್ಯ ಗಿರಿಜೆಯೊಡನೆ ಗುಡ್ಡದ ಆಶ್ರಮಕ್ಕೆ ಫಲಪುಷ್ಪಗಳನ್ನು ಸ್ವಾಮಿಜಿಗೆ ಅರ್ಪಿಸಿ ದೀರ್ಘದಂಡ ನಮಸ್ಕಾರ ಮಾಡಿ ಗಿರಿಜೆಯ ಹಣೆ ಹಸ್ತಗಳು ಪಾದಸ್ಪರ್ಶ ಮಾಡುತ್ತಿದ್ದಂತೆ ಸ್ವಾಮಿಗಳಿಗೆ ಪುಳಕಾಂಕುರವಾಗುತ್ತದೆ. ಮರಿಲಿಂಗಯ್ಯ ತಮ್ಮ ಪಾದಪೂಜೆಗಾಗಿ ಮನೆಗೆ ಆಹ್ವಾನಿಸುವುದು. ಸ್ವಾಮಿಗಳು ಉಪಚಾರದಿಂದ ಸಂತುಷ್ಟರಾಗಿ, ಮರಿಲಿಂಗಯ್ಯನ ಮಾತಿನ ಮೋಡಿಗೆ ಮರುಳಾಗಿ ಮರಿಲಿಂಗಯ್ಯ ಅಲ್ಲ, ಜಾಣಲಿಂಗಯ್ಯ ಎಂದು ಹೆಸರಿಸಿ ಅದೇ ಹೆಸರೇ ಶಾಶ್ವತವಾಗುತ್ತದೆ. ಹೆಸರಿಗೆ ತಕ್ಕಂತೆ ಮರಿಲಿಂಗಯ್ಯನವರು ಜಾಣಲಿಂಗಯ್ಯನೇ. ಸ್ವಾಮಿಗಳು ಆಗಾಗ್ಗೆ ಜಾಣಲಿಂಗಯ್ಯ ತೋಟದ ಅತಿಥಿಗೃಹದಲ್ಲಿದ್ದು ಇಂದ್ರಸುಖ-ವನ್ನನುಭವಿಸುತ್ತಾರೆ. ಪರಿಚಾರಿಕೆಗೆ ಗಿರಿಜೆ ಭವಾನಿಯರು, ಹೇಗಾದರೂ ಮಾಡಿ

ಭವಾನಿ ಮಗನನ್ನು ಉತ್ತರಾಧಿಕಾರಿಯನ್ನಾಗಿ ರೂಪಿಸುವುದಾದರೆ, ತಾನೇ ಸರ್ವಾಧಿಕಾರಿಯಾಗಿ ಮೆರೆಯಬಹುದೆಂದು ಯೋಚಿಸುತ್ತಾನೆ. ಅದಕ್ಕೆ ಮಡದಿಯರು ಸಹಕಾರ ನೀಡುತ್ತಾರೆ. ಇಲ್ಲಿ ಹೆಂಡತಿಯರು ಅವನಿಗೆ ಬುದ್ಧಿಹೇಳಬಹುದಿತ್ತು. ಆದರೆ ಗಿರಿಜೆಯು ಆಸೆಬುರುಕಿಯಾಗಿರುತ್ತಾಳೆ.

ಹೀಗೆ ರೀತಿನೀತಿ ಇಲ್ಲದಂತೆ ಮರಿಲಿಂಗಯ್ಯ ತನ್ನ ಜೀವನವನ್ನು ನಡೆಸುತ್ತಾನೆ. ಇದೊಂದು ನೈತಿಕತೆ ಇಲ್ಲದ ವ್ಯಕ್ತಿಯನ್ನು ಕುರಿತ ಕತೆ.

***

# ಅಧ್ಯಾಯ – ೪

# ದೇಜಗೌರವರ ಕಾದಂಬರಿ

'ನಗ್ನಚಿತ್ರಗಳು' ದೇಜಗೌರವರ ಸೃಜನಶೀಲ ಸಾಹಿತ್ಯಕ್ಕೆ ಸೇರಿದ ಮೊದಲ ಕಾದಂಬರಿ ಎಂದರೆ ಅತಿಶಯೋಕ್ತಿಯಾಗಲಾರದು. ಈ ಕಾದಂಬರಿಯಲ್ಲಿ ಮುಖ್ಯವಾಗಿ ಕತೆಯು ಬೆಟ್ಟಯ್ಯ ವೈದ್ಯಶಿಕ್ಷಣ ಮುಗಿಸಿರುತ್ತಾನೆ. ಸಂಕಟೇಶ್ ಇವರಿಬ್ಬರೂ ಸೆನೆಟ್ ಸಿಂಡಿಕೇಟ್ ಚುನಾವಣೆಯಲ್ಲಿ ಹೇಗೆ ಗೆಲ್ಲುತ್ತಾರೆಂಬುದು.

ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಗುರುಗಳಿಗೆ ವಿಶೇಷವಾದ ಮನ್ನಣೆಯಿತ್ತು. ಅವರನ್ನು ಗಾಡಿಯಲ್ಲಿ ಕೂರಿಸಿ ಎಳೆದುಕೊಂಡು ಕರೆತರುತ್ತಿದ್ದರು. ಇದನ್ನು ನೋಡಿದರೆ ನಮಗೆ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರವರ ನೆನಪಾಗುತ್ತದೆ. ಇದಕ್ಕೆ ಅವರ ವಿದ್ವತ್ತೆ ಕಾರಣವಾಗಿತ್ತು. ಹಿಂದೆ ಇಂಟರ್‌ಮೀಡಿಯಟ್ ಸೇರಿ ಏಳೆಂಟು ಕಾಲೇಜುಗಳು ಮಾತ್ರ ಅಸ್ತಿತ್ವದಲ್ಲಿದ್ದವು. ವಿದ್ಯಾರ್ಥಿ ಸಂಖ್ಯೆ ಅಧಿಕವಾಗಿ ಕಾಲೇಜುಗಳ ಸಂಖ್ಯೆ ಅಧಿಕವಾಗಿ ಹೊಸ ಹೊಸ ವಿಶ್ವವಿದ್ಯಾನಿಲಯಗಳು ಅಸ್ತಿತ್ವಕ್ಕೆ ಬರುತ್ತಿವೆ. ರಾಜಕೀಯ ಪ್ರವೇಶಪಡೆದು ವಿದ್ಯಾರ್ಥಿಗಳ ಸಮೂಹದಲ್ಲಿ ಅಸಹನೆ, ಅಶಾಂತಿ ಕಂಡುಬರುತ್ತಿದೆ. ಗ್ರಂಥಾಲಯಗಳನ್ನು ಉಪಯೋಗಿಸಿಕೊಳ್ಳದೆ ಹಳೆಯ ನೋಟ್ಸನ್ನೇ ಉಪಯೋಗಿಸುವುದು ನಮ್ಮ ಇಂದಿನ ಪ್ರಾಧ್ಯಾಪಕರ ಜ್ಞಾನವನ್ನು ತೋರಿಸುತ್ತದೆ. ರಾಜಕೀಯ ಚುನಾವಣೆಯಂತೆ ಸೆನೆಟ್, ಸಿಂಡಿಕೇಟ್ ಚುನಾವಣೆಗಳು ಹಣಹೆಂಡಗಳು ಪಾತ್ರವಹಿಸುತ್ತವೆ. ಬೆಟ್ಟಯ್ಯ, ವೈದ್ಯಶಿಕ್ಷಣ ಮುಗಿಸಿ ದೇವಗೆರೆಯಲ್ಲಿ ಸ್ವಂತ ಕ್ಲಿನಿಕ್ ನಡೆಸುತ್ತಿರುತ್ತಾನೆ. ಅವನಿಗೆ ರಾಜಕೀಯ ಕ್ಷೇತ್ರದಲ್ಲಾಸಕ್ತಿ ಇರುವವ. ಧರ್ಮಪಾಲ ನಿವೃತ್ತ ಪ್ರಾಧ್ಯಾಪಕ, ಸಾಹಿತ್ಯ, ಶಿಕ್ಷಣ, ಸಮಾಜಸೇವೆಗಳಲ್ಲಿ ತೊಡಗಿಸಿಕೊಂಡಿರುವವರು. ರಾಜಕೀಯದಲ್ಲಿ ಹೆಸರು ಮಾಡಿ ಹಣಗಳಿಸಿಕೊಳ್ಳಬೇಕೆಂದು ಕಾಯುತ್ತಿರುವವನು. ಬೆಟ್ಟಯ್ಯ ಧರ್ಮಪಾಲರ ಸ್ನೇಹಸಂಪಾದಿಸುತ್ತಾನೆ. ಬೆಟ್ಟಯ್ಯ ಕುಶಾಲಪ್ಪನ ವಿರುದ್ಧ ಮಾತಾಡಿ ಧರ್ಮಪಾಲ ಪರವಾಗಿ ಮಾತನಾಡಿ ಶಹಭಾಷ್‌ಗಿರಿ ಪಡೆದುಕೊಳ್ಳಬೇಕೆಂದು ಹೊಂಚುಹಾಕುವುದು. ಸಿಂಡಿಕೇಟ್ ಚುನಾವಣೆಯ ಸುದ್ದಿ ತಿಳಿದ ಕೂಡಲೇ ಬೆಟ್ಟಯ್ಯ ಧರ್ಮಪಾಲರ ಮನೆಗೆ ಹೋಗಿ ನನಗೆ ಆಶೀರ್ವಾದ ಮಾಡಿ ಜೀವನ ಪರ್ಯಂತ ನಿಮ್ಮನ್ನು ನೆನೆಯುತ್ತೇನೆಂದು ಅಂಗಲಾಚುತ್ತಾನೆ. ಧರ್ಮಪಾಲರು ಮಹದೇವಯ್ಯನಿಗೆ ಮಾತುಕೊಟ್ಟಿರುತ್ತಾರೆ. ವಿಷಯ ತಿಳಿದ ಬೆಟ್ಟಯ್ಯ ಅವನು ನಮ್ಮ ಜಾತಿ ಅಲ್ಲ. ಹೇಗೆ ಮಾತು ಕೊಟ್ರಿ. ನನ್ನ ವಿರುದ್ಧವಾಗಿ ಕ್ಯಾನ್ವಾಸ್ ಮಾಡಿದರೂ ನಾನು ಗೆದ್ದೆಗೆಲ್ಲುತ್ತೇನೆ ಎಂದು ಹೊರಡುತ್ತಾನೆ, ಕುಶಾಲಪ್ಪನವರ

ಸಹಾಯಬೇಡುತ್ತಾನೆ. ಅದೇ ಸಮಯಕ್ಕೆ ಜುನಿಯಮ್ಮ, ಚಿಕ್ಕಣ್ಣ ಬಂದು ಭೌತಶಾಸ್ತ್ರದ ಪ್ರಾಧ್ಯಾಪಕ ಚಂದ್ರಹಾಸನ ಇತಿಹಾಸ, ಭೂಗೋಳ, ಮನೋವಿಜ್ಞಾನ ಇಲಾಖೆಗಳ ಪ್ರಾಧ್ಯಾಪಕರಾಗಲಿ ಚುನಾವಣೆಗೆ ಸ್ಪರ್ಧಿಸುವುದಿಲ್ಲವಂತೆಂದು ಹೇಳುತ್ತಾರೆ. ತಾವೇ ಮುಂದೆ ಗೆಲ್ಲಬಹುದೆಂದು ಹುರಿದುಂಬಿಸುತ್ತಾರೆ. ಬೆಟ್ಟಯ್ಯ ಯಾವುದೇ ಅಶ್ಲೀಲ ವ್ಯವಹಾರಕ್ಕೂ ಪ್ರವೇಶಿಸದೆ, ಮಾತಿನಲ್ಲಿಯೇ ಸ್ನೇಹಿತರನ್ನು ತೃಪ್ತಿಪಡಿಸಿ, ಊಟ–ತಿಂಡಿಗಳಿಗೆ ಜೊತೆಯಲ್ಲಿದ್ದವರಿಗೆ ಧಾರಾಳವಾಗಿ ಖರ್ಚು–ಮಾಡುತ್ತಾನೆ. ದಿನಕಳೆದಂತೆ ವಿಶ್ವವಿದ್ಯಾನಿಲಯಗಳಲ್ಲಿ ಬೆಟ್ಟಯ್ಯ ಜನಪ್ರಿಯತೆ ಗಳಿಸಿಕೊಳ್ಳುತ್ತಾನೆ. ಪರೋಪಕಾರಿ, ಕಷ್ಟದಲ್ಲಿರುವವರಿಗೆ ರಕ್ಷಕ. ದಡ್ಡರ, ಸೋಮಾರಿಗಳ ಉದ್ಧಾರಕ ಎಂಬ ಖ್ಯಾತಿಗೆ ಪಾತ್ರನಾಗುತ್ತಾನೆ. ಈ ಸಂಕಟೇಶನೊಬ್ಬ ಬೆಟ್ಟಯ್ಯನಿಗೆ ಗಂಟುಬೀಳುತ್ತಾನೆ. ಈತ ಅಲ್ಪಸಂಖ್ಯಾತ ಕೋಮಿನ, ದಲಿತರ ನಾಯಕರನ್ನು ಬಿಗಿಯಾಗಿ ಹಿಡಿದುಕೊಂಡಿದ್ದಾನೆ. ಅವರ ವೋಟುಗಳನ್ನು ತಾನು ಪಡೆಯಬಹುದು, ತನ್ನ ಕಡೆಯವರೆಲ್ಲರೂ ಅವನಿಗೆ ವೋಟು ಮಾಡುವುದಿಲ್ಲ; ಅವನು ಗೆಲ್ಲುವುದು ಕಷ್ಟ; ಅಕಸ್ಮಾತ್ ಗೆದ್ದರೆ ಕೋಲೆಬಸವನಂತೆ ಅವನನ್ನಾಡಿಸಬಹುದು. ಚುನಾವಣೆಯ ಖರ್ಚಿಗೂ ಅವನತ್ತಿರ ಹಣವಿಲ್ಲ. ಹಾಗಾಗಿ ತನ್ನನ್ನೇ ಆಶ್ರಯಿಸುತ್ತಾನೆಂದು ಸಂಕಟೇಶನನ್ನು ಸೂತ್ರವನ್ನಾಗಿ ಮಾಡಿಕೊಳ್ಳುತ್ತಾನೆ. ಚುನಾವಣೆಯಲ್ಲಿ ಗೆಲ್ಲುತ್ತಾನೆ. ಬೆಟ್ಟಯ್ಯ ತನ್ನ ವೈದ್ಯಗೃಹದಲ್ಲಿ ಮಿನಿ ವಿಶ್ವವಿದ್ಯಾಲಯದ ಕಛೇರಿಯನ್ನು ತೆರೆಯುತ್ತಾನೆ.

ಇವರು ನಿವೃತ್ತ ಪ್ರಾಧ್ಯಾಪಕರು, ನಿವೃತ್ತರಾದರೂ, ಸಾಹಿತ್ಯ, ಶಿಕ್ಷಣ, ಸಮಾಜಸೇವೆಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಬೆಟ್ಟಯ್ಯನೊಂದಿಗೆ ಕುರಿತು ಮಾತನಾಡುವಾಗ ಶಾಸನಸಭೆಯ ಸದಸ್ಯರಾಗಿರುತ್ತಾರೆಂಬ ವಿಷಯ ತಿಳಿಯುತ್ತದೆ. ಬೆಟ್ಟಯ್ಯ ಚುನಾವಣೆ ಕ್ಷೇತ್ರದಲ್ಲಿ ಆಸಕ್ತಿ. ಆದರೆ ಕ್ಷೇತ್ರ ಹುಡುಕಿಕೊಳ್ಳುವುದು ಕಷ್ಟವಾಗಿದೆ ಎಂದಾಗ ಧರ್ಮರಾಯ ವಿ.ವಿ.ದ ಸೆನೆಟ್ ಸಿಂಡಿಕೇಟ್‌ಗಳಿಗೆ ಸ್ಪರ್ಧಿಸಿ ನಾವು ಗೆದ್ದದ್ದಾದರೆ ವಿಶ್ವವಿದ್ಯಾನಿಲಯಗಳ ಶಿಕ್ಷಕರ ಪರಿಚಯವಾಗಿ ಶಿಕ್ಷಕರನ್ನು ಪರಿಚಯಿಸಿಕೊಳ್ಳಬಹುದು. ಆ ಪರಿಚಯವನ್ನು ಬಂಡವಾಳ ಮಾಡಿಕೊಂಡು ಶಿಕ್ಷಕರ ಅಥವಾ ಪದವೀಧರರ ಕ್ಷೇತ್ರಗಳಿಂದ ಮೇಲ್ಮನೆಗೆ ಸ್ಪರ್ಧಿಸಬಹುದು. ಒಮ್ಮೆ ಮೇಲ್ಮನೆಯ ಜಾಗ ಸಿಕ್ಕಿದ್ದರೆ, ಕೆಳಮನೆಗೂ ಜಾಗಮಾಡಿಕೊಳ್ಳಬಹುದು ಎಂದು ಧರ್ಮಪಾಲರು ಸಲಹೆನೀಡುತ್ತಾರೆ. ಕೆಲವು ಆಪಾದನೆಗೊಳಗಾಗಿ ಬೇರೊಂದು ವಿಶ್ವವಿದ್ಯಾನಿಲಯದಲ್ಲಾದ ದೇವಗಿರಿ ವಿಶ್ವವಿದ್ಯಾನಿಲಯಕ್ಕೆ ಹಿಂದಿರುಗಿದ ಕುಶಾಲಪ್ಪನವರಿಗೆ ಧರ್ಮಪಾಲರ ಮೇಲೆ ವಿನಾಕಾರಣ ಭಾರಿ ಆಕ್ರೋಶ. ವಿದ್ಯಾರ್ಥಿಗಳನ್ನು ಇವರ ಮೇಲೆ ಕಟ್ಟುತ್ತಾನೆ. ಇವೆಲ್ಲ ಆಪಾದನೆಗಳಿಗೆ

ಧರ್ಮಪಾಲ ತಲೆಕೆಡಿಸಿಕೊಳ್ಳುವುದಿಲ್ಲ. ಬೆಟ್ಟಯ್ಯ, ಕುಶಾಲಪ್ಪನವರ ವಿರುದ್ಧ ಆಕ್ರಂಧನ ವ್ಯಕ್ತಪಡಿಸಿದಾಗ "ನೀವು ಕುಶಾಲಪ್ಪನ ಮೇಲೆ ಮಾನನಷ್ಟ ಮೊಕದ್ದಮೆ ಹೂಡಬಾರದೇಕೆ?" ಸಂತೋಷವಾಗುವುದಾದರೆ, ನನ್ನನ್ನು ನಿಂದಿಸುವ ಮೂಲಕ ಅವರು ಪುಣ್ಯಕಟ್ಟಿಕೊಳ್ಳುವುದಾದರೆ, ಅವರಿಗೆ ಸಮಾಜದಲ್ಲಿ ಗೌರವ ಬರುವುದಾದರೆ ಬರಲಿ ಬಿಡಿ"[೧] ಎಂದು ಧರ್ಮಪಾಲರ ಮಾತಿನಲ್ಲಿ ಸತ್ಯವಿದೆ. ಬೆಟ್ಟಯ್ಯ ಸಿಂಡಿಕೇಟ್ ಚುನಾವಣೆಯಲ್ಲಿ ತಾನು ನಿಲ್ಲುವಂತೆ ಕೇಳಿದಾಗ ಪಾಲರು ಮಹದೇವಯ್ಯನಿಗೆ ಭಾಷೆಕೊಟ್ಟಿರುವುದಾಗಿ ಅಕಾಡೆಮಿಕ್ ಕೌನ್ಸಿಲ್‌ನಿಂದ ಚುನಾವಣೆಯಾದ್ದರಿಂದ ಒಬ್ಬ ಪ್ರಾಧ್ಯಾಪಕ ನಿಲ್ಲಬೇಕಾಗಿರುವುದರಿಂದ ತಾನು ಮಾತುಕೊಟ್ಟಿರುವುದಾಗಿ ಹೇಳುತ್ತಾರೆ. ಇಲ್ಲಿ ಬೆಟ್ಟಯ್ಯ ಅರ್ಥಮಾಡಿಕೊಳ್ಳ-ಬಹುದಾಗಿತ್ತು. ಆದರೆ ನಿನ್ನ ಪರವಾಗಿ ಸಹಾಯಮಾಡುತ್ತೇನೆಂದು ಬೆಟ್ಟಯ್ಯನಿಗೆ ಕೊಟ್ಟ ಮಾತು ಮರೆತು ನಿನಗೆ ಹೇಳಿದೆನೆಂದು ಹೇಳಿ ನಿಮ್ಮ ಪೂರ್ಣ ಸಹಕಾರ ನನಗೆ ನೀಡಬೇಕೆಂದು ಬೆಟ್ಟಯ್ಯ ಕೇಳುತ್ತಾನೆ. ಧರ್ಮಪಾಲರು ಬೆಟ್ಟಯ್ಯನ ಕೈಹಿಡಿದುಕೊಂಡು ನೀವು ಗೆದ್ದರೆ ನನಗೂ ಸಂತೋಷ, ನಿಮಗಾಗಿ ನಾನು ಸೋಲನನುಭವಿಸಲೂ ಸಿದ್ಧ' ಎನ್ನುತ್ತಾರೆ. ಧರ್ಮಪಾಲರು ನಿವೃತ್ತರಾದರೂ ಅವರ ಸಾಧನೆಯಿಂದ ಜನರಮನಸ್ಸಿನಲ್ಲಿ ಉಳಿಯುತ್ತಾರೆ.

ಆಂಗ್ಲ ಪ್ರಾಧ್ಯಾಪಕ ಚಿಕ್ಕಣ್ಣ, ಅವನನ್ನು little big brother ಎಂದು ವಿದ್ಯಾರ್ಥಿಗಳೆಲ್ಲರೂ ಕರೆಯುತ್ತಿದ್ದರು. ಅವನಿಗೆ ಕುಲಸಚಿವರನ್ನು ತಮ್ಮ ಬುಟ್ಟಿಗೆ ಹೇಗೆ ಹಾಕಿಕೊಳ್ಳಬೇಕು. ಬೇರೆಯವರ ಮೇಲೆ ಹೇಗೆ ಅಪಪ್ರಚಾರ ಮಾಡಬೇಕು. ಯಾರ ವಿರುದ್ಧ ಹುಡುಗರನ್ನೆತ್ತಿ ಕಟ್ಟಬೇಕೆಂಬ ವಿಷಯವೆಲ್ಲವೂ ಆತನ ಕೊಠಡಿಯಲ್ಲಿಯೇ ಚರ್ಚೆಯಾಗುತ್ತಿರುತ್ತದೆ. ವಿಶ್ವವಿದ್ಯಾನಿಲಯದ ಕೊಠಡಿಯು ಪ್ರಾಧ್ಯಾಪಕರ ಜ್ಞಾನಕೊಠಡಿಯಾಗಿರದೇ ರಾಜಕೀಯ ವಿಚಾರಗಳು ಚರ್ಚೆಯಾಗುತ್ತಿತ್ತು. ಬೆಟ್ಟಯ್ಯ ಇದ್ದಾಗ ಕೆಲವು ಇಲಾಖೆಗಳ ಪ್ರಾಧ್ಯಾಪಕರನ್ನು ಚಿಕ್ಕಣ್ಣ ಹೊಗಳುತ್ತಾನೆ. ಅವನು ಅಲ್ಲಿಂದ ಹೋದನಂತರ ಅವನು ಗೋಸುಂಬೆ. ಹೇಗಾದರೂ ಮಾಡಿ ಸೆನೆಟ್, ಸಿಂಡಿಕೇಟ್‌ಗಳನ್ನು ಮಾಡಿಕೊಂಡು, ವಿ.ವಿ.ಯನ್ನು ಆಳಬೇಕೆಂದಿದ್ದಾನೆ. ಎಂದು ಅವನ ವಿರುದ್ಧವಾಗಿ ಹೇಳುತ್ತಾನೆ. ಮತ ಪ್ರಚಾರದಲ್ಲೂ ಆತ ಹೇಳಿ ಮಾಡಿಸಿದಂತಿದ್ದ ಬೆಟ್ಟಯ್ಯನನ್ನು ಉಪಯೋಗಿಸಿಕೊಂಡು ಒಳ್ಳೆಯ ದುಡ್ಡುಮಾಡಿಕೊಳ್ಳುತ್ತಾನೆ.

ಜುನಿಯಮ್ಮ – ಅಕಾಡೆಮಿಕ್ ಕೌನ್ಸಿಲ್‌ನಿಂದ ಚುನಾವಣೆ ನಡೆಯುತ್ತದೆಂಬ ಸುದ್ಧಿಯನ್ನು ಎಲ್ಲರಿಗೂ ತಿಳಿಸುತ್ತಾಳೆ. ಜುನಿಯಮ್ಮ ಮಹಾದೇವಯ್ಯ

---

೧. ದೇಜಗೌ, ನಗ್ನ ಚಿತ್ರಗಳು, ವಿದ್ವತ್ಪ್ರಕಾನ, ಮೈಸೂರು, ೨೦೦೪, ಪುಟ. ೫.

ಧರ್ಮಪಾಲರೇ ಈ ಸ್ಥಾನಕ್ಕೆ ಯೋಗ್ಯರೆಂದು ಹೇಳಿದಾಗ ನಿವೃತ್ತನಾಗಿರುವ ನನಗೆ ಈ ಚುನಾವಣೆಗಳ ಹವ್ಯಾಸ ಬೇಡ. ದಯವಿಟ್ಟು ಕ್ಷಮಿಸಿ ಎಂದು ಎಲ್ಲರ ಬಲವಂತದಿಂದಾಗಿ ನಾನು ಯಾರ ಮನೆಗೂ ಹೋಗೋಲ್ಲ, ಫೋನು ಸಹ ಮಾಡಲ್ಲ, ಯಾರಾದರೂ ಮನೆಗೆ ಬಂದದ್ದಾದರೆ ಮಹದೇವಯ್ಯನ ಪರವಾಗಿ ಎರಡು ಮಾತು ಹೇಳುತ್ತೇನೆ ಎಂದರಂತೆ. ಜಲಿಯಮ್ಮ ಕುಶಾಲಪ್ಪನವರ ಕಡೆಗೆ ನೋಡಿ 'ನೀವು ಅರ್ಜಿ ಹಾಕಿದರೆ ಸಾಕು ಗೆಲ್ಲುತ್ತಿರಿ' ಎಂದು ಹೊಗಳಿ ಹೊಗಳಿ ಪಟ್ಟಕ್ಕೇರಿಸುತ್ತಾರೆ. ಜುನಿಯಮ್ಮ ವಿದ್ಯಾರ್ಥಿನಿನಿಲಯದ ವಾರ್ಡ್‌ನ್‌ಳಾಗಿದ್ದಳು. ವಿದ್ಯಾರ್ಥಿಗಳನ್ನು ಕರೆದುಕೊಂಡು ಹಾಗಾಗೆ ವಿಹಾರಾಕ್ಕೆ ಹೋಗುತ್ತಿರುತ್ತಾಳೆ. ಕುಶಾಲಪ್ಪನವರೂ ಜೊತೆಯಲ್ಲಿರುತ್ತಾರೆ. ಬತ್ತಿದೆದೆಯ ನಿಸ್ಸಾರದೇಹದ, ಉಬ್ಬುಹಲ್ಲಿನ ಜೋಲುಮೋರೆಯ ಕುಬ್ಜೆ ಜುನಿಯಮ್ಮ. ಚಿಕ್ಕಣ್ಣ – ಜನಿಯಮ್ಮ ಪಾಲಯ್ಯರು ಕ್ಯಾನ್ವಾಸ್ ಮಾಡುವುದರಲ್ಲಿ ಎತ್ತಿದ ಕೈ. ಬೆಟ್ಟಯ್ಯನ ಪರವಾಗಿ ಕ್ಯಾನ್ವಸ್ ಮಾಡುತ್ತಾರೆ. ಬೆಟ್ಟಯ್ಯ ಸಂಕಟೇಶರಿಬ್ಬರು ಜಯಗಳಿಸುತ್ತಾರೆ. ಚಿಕ್ಕಣ್ಣ ವೆಂಕಟಯ್ಯ ಪಾಲಯ್ಯ ಅಭಿನಂದನ ಸಮಾರಂಭವನ್ನೇರ್ಪಡಿಸುತ್ತಾರೆ. ಭಾಷಣ ಮಾಡಬೇಕಾದರೆ ಇಬ್ಬರು ಉಚ್ಚಾರ ಸರಿಯಾಗಿರುವುದಿಲ್ಲ. ಬೆಟ್ಟಯ್ಯ ನನ್ನ ಜಯವೇ ನಿಮ್ಮ ಜಯ, ನನಗೆ ಯಾರ್‍ಯಾರು ವೋಟ್‌ಕೊಟ್ಟವ್ರೆ ಗೊತ್ತು; ಯಾರು ಕೊಟ್ಟಿಲ್ಲ ಅದೂ ಗೊತ್ತು. ಅವರನ್ನ ನಾ ಇಚಾರ್ಕ್ಕೋತ್ತೀನಿ. ಸದ್ಯಕ್ಕೆ ಕುತ್ಕೊತೀನಿ ಅಂದರೆ ಸಂಕಟೇಶ ಜುನಿಯಮ್ಮ, ಗಿರಿಜಾರ ಇಟ್ಕೊಂಡು ದಿನಾಲೂ ಪೂಜೆ ಮಾಡ್ತೀನಿ, ಜುನಿಯಮ್ಮ ಯಾರಿಗಾದ್ರೂ ಸರಿಯೇ ಒಳ್ಳೆ ಸೇವೆ ಮಾಡ್ತಾರೆ ಎನ್ನುತ್ತಾರೆ.

ಬೆಟ್ಟಯ್ಯನ ಕಾಲಿಗೆ ಅಧ್ಯಾಪಕರು, ನೌಕರರು ನಮಸ್ಕಾರಮಾಡುತ್ತಾರೆ. ವೋಟು ನೀಡಬೇಕಾದಾಗ ಎಂತಹ ವ್ಯಕ್ತಿಗೆ ನೀಡಬೇಕು. ಅವನ ವಿದ್ಯಾರ್ಹತೆ, ಆತನ ವ್ಯಕ್ತಿತ್ವವನ್ನು ನೋಡಿ ನಾವು ಚುನಾಯಿಸಬೇಕಾಗುತ್ತದೆ. ಆದರೆ ಜನರೆಲ್ಲರು ಹಣ–ಹೆಂಡದಾಸೆಗೆ ಬೆಟ್ಟಯ್ಯನಂತಹ ವ್ಯಕ್ತಿಯನ್ನು ಗೆಲ್ಲಿಸುತ್ತಾರೆ. ತಪ್ಪು ಮತದಾರರದೆನಿಸುತ್ತದೆ.

**ಸಂಚು:** ಕುಲಪತಿ ಸೇವಂತಿದಾಸರು ಧರ್ಮಪಾಲರಿಗೆ ತಮ್ಮ ಮನೆಗೆ ತಿಂಡಿಗೆ ಬರುವುದಾಗಿ ಆಕೆಯೇ ತಿಳಿಸಿ ಮನೆಗೆ ಬರುತ್ತಾಳೆ. ಧರ್ಮಪಾಲಯ ಸೇವಂತಿಗೆ ಆಡಳಿತಾನುಭವಗಳನ್ನು ಈಗಿನ ಪ್ರಾಧ್ಯಾಪಕರ ಕಾರ್ಯವೈಖರಿಯನ್ನು ವಿವರಿಸುತ್ತಾರೆ. ಚಂದ್ರಹಾಸ ವೆಂಕಟಯ್ಯನವರ ಶಿಷ್ಯರೆಂದು. ಪಾಲಯ್ಯನೂ ಆ ಕಾಲೇಜಿನಲ್ಲಿದ್ದನಂತೆ, ಅಧಿಕಾರವನ್ನುಪಯೋಗಿಸಿಕೊಂಡು ಮಗನಿಗೆ ಉಪನ್ಯಾಸ ಹುದ್ದೆ ಕೊಡಿದ್ದಾಗಿ ನಾವು ಜಾತಿವಾದಿಯೆಂದು, ಬಂಧುವಾದಿಯೆಂದು ಬೆಟ್ಟಯ್ಯ,

ಸಂಕಟೇಶ, ಸುಬ್ಬಣ್ಣ ಹೇಳಿದಾಗ ನಾನು ನಿಜವಿರಬಹುದೆಂದುಕೊಂಡೆ ಎಂದಾಗ ಆ ಸಮಯ ನಾನು ನಿವೃತ್ತನಾಗಿದ್ದೆ ಎನ್ನುತ್ತಾರೆ. ಮಧುರೆಯ ಅಮೇರಿಕನ್ ಕಾಲೇಜಿನ ರಿಚರ್ಡ್ ರಾಜ್ ಪ್ರಾಧ್ಯಾಪಕರ ಪರಿಚಯದಿಂದ ಚಂದ್ರಹಾಸರ ಬಹುಬೆಲೆಬಾಳುವ ಯಂತ್ರೋಪಕರಣದ ನಿರ್ಮಾತೃವೆಂದು ಹೇಳಿದರು. ಧರ್ಮಪಾಲರು ಸೇವಂತಿ-ಯನ್ನು ಕುರಿತು ಕುಲಪತಿಗಳಾದವರು ನಿರ್ವಿಕಾರ ಮನೋಭಾವದಿಂದ, ನಿಷ್ಪಕ್ಷಪಾತವಾಗಿ ವಿಶ್ವವಿದ್ಯಾನಿಲಯವನ್ನು ನಡೆಸಬೇಕು. ತಾವು ಮಾಡಿದ್ದು ತಪ್ಪೆಂದು ತಿಳಿದಾಗ, ಪ್ರಾಯಶ್ಚಿತ ಮಾಡಿಕೊಳ್ಳುವವರು ಅಪರೂಪ ಎನ್ನುತ್ತಾರೆ. ಇಲ್ಲಿ ಶಿಕ್ಷಕರೆಲ್ಲರೂ ಹಿಂಸೆ, ಕ್ರೌರ್ಯ, ಲೈಂಗಿಕತೆ, ಸೇಡು, ಶಿಕ್ಷಣ ಕ್ಷೇತ್ರವನ್ನಾವರಿಸಿಕೊಳ್ಳುವುದಾದರೆ, ಶಿಕ್ಷಕರನ್ನು ಸುಸಂಸ್ಕೃತರೆಂದು ಕರೆಯಲು ಹೇಗೆ ಸಾಧ್ಯ ಎಂದು ಧರ್ಮಪಾಲರೆ ಪ್ರಶ್ನೆಯನ್ನಾಕಿಕೊಳ್ಳುತ್ತಾರೆ.

ಮತ್ತೊಂದು ದಿನ ಸೇವಂತಿ ಧರ್ಮಪಾಲರ ಇಡೀ ಕುಟುಂಬವನ್ನು ಭೋಜನಕ್ಕಾಗಿ ಆಹ್ವಾನಿಸಿರುತ್ತಾಳೆ. ಸೇವಂತಿ ಇಲ್ಲಿ ಹಿಂದಿನ ಕುಲಪತಿಗಳ ಕಾರ್ಯವೈಖರಿಯನ್ನರಿತುಕೊಳ್ಳುವುದು, ಇದರಿಂದ ತನಗೆ ಮುಂದಿನ ಯೋಜನೆ-ಗಳನ್ನು ರೂಪಿಸಲು ಮತ್ತು ತನ್ನಲ್ಲಿ ಯಾವುದಾದರೂ ತಪ್ಪುದೋಷಗಳಿದ್ದರೆ ಅದನ್ನೆಲ್ಲ ಸರಿಪಡಿಸಿಕೊಳ್ಳಬಹುದೆಂಬ ಉದ್ದೇಶವಾಗಿತ್ತು. ಸೇವಂತಿ ಧರ್ಮರಾಯರಿದ್ದಾಗ ನಿಮ್ಮ ಕಾಲದ ನೇಮಕಾತಿಗಳಲ್ಲಿ ಯಾರಿಗೂ ಅನ್ಯಾಯ-ವಾಗಿಲ್ಲ. ಯಾವ ಜಾತಿ ವಲಯಕ್ಕೆ ಅನ್ಯಾಯವಾಗಿಲ್ಲ. ಬ್ರಾಹ್ಮಣರು ವಿದ್ಯೆಯಲ್ಲಿ ಹೆಚ್ಚಿನ ಜ್ಞಾನವುಳ್ಳವರಾಗಿರುವುದರಿಂದ ನಾನು ಹೆಚ್ಚು ಹೆಚ್ಚಾಗಿ ನೇಮಿಸಿಕೊಳ್ಳುತ್ತಿದೆ. ಉತ್ತಮವರ್ಗದವರನ್ನು ಬಳಸಿಕೊಂಡು ಶೂದ್ರಾತಿಶೂದ್ರರನ್ನು ಮೇಲಕ್ಕೆತ್ತುವುದು ನನ್ನ ಉದ್ದೇಶವೆಂದು ಸಿಂಡಿಕೇಟ್ ಸದಸ್ಯರಂತೆ ನನ್ನನ್ನು ತಮ್ಮ ಹತೋಟಿ-ಯಲ್ಲಿಡಲು ಸಾಧ್ಯವಾಗಲಿಲ್ಲ.

ಹೀಗೆ ಮಾತನಾಡುತ್ತಿರುವಾಗ ಬೇಗೂರು ವಿಶ್ವವಿದ್ಯಾನಿಲಯದ ಕುಲಪತಿ ನಾರಣಪ್ಪ ಬರುತ್ತಾರೆ. ಮಾತು ಮುಂದುವರೆಸಿ ಓದಿನಲ್ಲಿ ಆಸಕ್ತಿ ಇಲ್ಲದೆ ಕರ್ತವ್ಯಭ್ರಷ್ಟರಾಗಿ ಸದಾ ಕಿತಾಪತಿಯಲ್ಲಿರುವವರೇ ಸರಿಯಾಗಿ ಪಾಠಮಾಡು-ವುದಿಲ್ಲವೋ ಅವರ ಪರವಾಗಿ ಬೆಟ್ಟಯ್ಯ ಸಿಂಡಿಕೇಟ್‌ನಲ್ಲಿ ಅವರನ್ನು ಸಮರ್ಥಿಸಿಕೊಳ್ಳುತ್ತಾನೆಂದು ವಿದ್ಯಾವಂತ ಅಜ್ಞಾನಿ ಶಿಕ್ಷಕರು ಅಂಥ ವಿದ್ಯಾರ್ಥಿಗಳ ಗುಂಪುಕಟ್ಟಿಕೊಂಡು, ಅಧಿಕಾರಿಗಳನ್ನು ಹೆದರಿಸುತ್ತಾರೆ. ಹಾಗೆಯೇ ವಿಜ್ಞಾನ ವಿಭಾಗದ ಪ್ರಾಧ್ಯಾಪಕ ಬಲರಾಮಯ್ಯ ಅಂಕ ಕಡಿಮೆ ಇದ್ದು ರಾಜಕೀಯ ನಾಯಕರೊಬ್ಬರ ಸಹಾಯದಿಂದ ಎಂಎಸ್‌ಸಿಗೆ ಸೀಟು ಗಿಟ್ಟಿಸಿ ಸರಿಯಾಗಿ ವ್ಯಾಸಂಗ ಮಾಡದೇ, ಪೋಲಿಹುಡುಗರನ್ನು ಕಟ್ಟಿಕೊಂಡು ಗಲಾಟೆ ಮಾಡಿಸುವುದು,

ದಲಿತನೆಂದು ಅಂಗಲಾಚಿ ಪಾಸುಮಾಡುತ್ತಾನೆ. ಅದೇ ಆಧಾರದ ಮೇಲೆ ಕೆಲಸ ಗಿಟ್ಟಿಸಿಕೊಳ್ಳುತ್ತಾನೆ. ವಿಜ್ಞಾನ ತರಗತಿಯಲ್ಲಿ ಅವನು ರಾಜಕೀಯ ಪಾಠದಲ್ಲಿ ಮುಳುಗಿರುತ್ತಾರೆ. ವಿದ್ವತ್ತಿನಲ್ಲಿ ಸೊನ್ನೆಯಾದ ಪಾಲಯ್ಯ ಆಡಳಿತ ಪಕ್ಷದ ಅಧ್ಯಕ್ಷರು ಮೊದಲಗೊಂಡು ರಾಜಭವನದ ಅಧಿಕಾರಿ ಮಂತ್ರಿ ಬಂಧುಗಳಿಗೆ ಲಂಚವಿದ್ಯೆಯನ್ನು ಕಲಿಸುತ್ತಾನೆ. ಕುಲಪತಿಯಾಗಿರುವ ವಿಶ್ವವಿದ್ಯಾನಿಲಯದ ಸಮಾರಂಭವೊಂದಕ್ಕೆ ರಾಜ್ಯಪಾಲರ ಮಗನಿಗೆ ನೋಟುಗಳ ಕಂತೆಗಳಿದ್ದ ಪೆಟ್ಟಿಗೆಯನ್ನು ಕಾಣಿಕೆಯಾಗಿ ನೀಡುತ್ತಾರೆಂದು ನಾರಣಪ್ಪ ಹೇಳುತ್ತಿದ್ದಂತೆ, ಇಲ್ಲಿ ರಾಜ್ಯಪಾಲರ ಮಗನಿಗೆ ಲಂಚಕೊಡುತ್ತಿದ್ದಾರೆಂದು ಅವರು ಹೇಗೆ ಅದನ್ನು ಸ್ವೀಕರಿಸುತ್ತಾರೆ. ಮತ್ತು ಅಸತ್ಯ. ಲಂಚಗುಳಿತನವನ್ನೇ ಭ್ರಷ್ಟಾಚಾರ ಪಿಡುಗು ಅಳಿಸುವ ಶಿಕ್ಷಕರೇ ಈ ಅನ್ಯಮಾರ್ಗ ಅನುಸರಿಸಿದರೆ ಮಕ್ಕಳಿಗೆ ನ್ಯಾಯ, ಧರ್ಮ ಸತ್ಯದ ದಾರಿತೋರಿಸಿ ಮುಂದಿನ ಪ್ರಜೆಗಳನ್ನಾಗಿ ಮಾಡುವವರ್ಯಾರು? ಸೇವಂತಿ, ಲಂಚ ಎಲ್ಲೆಲ್ಲೂ ಇದ್ದದ್ದೇ. ಲಂಚಕೊಟ್ಟು ಗಿಟ್ಟಿಸಿದ ಹುದ್ದೆಯನ್ನು ನಾನಾಮಾರ್ಗಗಳ ಮೂಲಕ ಅದರ ಬಡ್ಡಿ, ಚಕ್ರಬಡ್ಡಿ ಸೇರಿಸಿ ವಸೂಲಿ ಮಾಡಿಕೊಳ್ಳುತ್ತಾರೆ.

ಪಾಲಯ್ಯ ಪ್ರಾಧ್ಯಾಪಕ, ಕದೀಮ, ಘಾಟಿ, ಕಂಪ್ಯೂಟರ್‌ನ ಮುಖಂಡತ್ವವನ್ನು ಪಾಲಯ್ಯನಿಗೆ ವಹಿಸಿಕೊಡುವಂತೆ ಬೆಟ್ಟಯ್ಯ ಅವರ ಪರ ಐದಾರು ತಿಂಗಳಲ್ಲಿ ಐದಾರು ಲಕ್ಷ ತೆಗೆದುಕೊಂಡರೆಂಬ ವದಂತಿಯಾಗಿತ್ತು. ವಿಚಾರಿಸಿದಾಗ ಅವ್ಯವಹಾರದ ಗುಟ್ಟು ಕಾಣಲಿಲ್ಲ. ವಿಚಾರಣಾಸಮಿತಿಯು ವರದಿ ಬರುವುದರೊಳಗೆ ಪಾಲಯ್ಯನಿಗೆ ಉನ್ನತಸ್ಥಾನಕ್ಕೆ ಬಡ್ತಿ ದೊರೆಯುತ್ತದೆ. ಬಡ್ತಿ ನೀಡುವಾಗ ಅಭ್ಯರ್ಥಿಗಳ ಸಾಧನೆ ಸಿದ್ಧಿ ಗುಣಶೀಲಾದಿ ಅರ್ಹತೆಗಳನ್ನು ರಾಜ್ಯಪಾಲರಾಗಲಿ, ಸರ್ಕಾರವಾಗಲಿ ಸರಿಯಾಗಿ ಪರಿಶೀಲಿಸುವುದಿಲ್ಲ. ಹೀಗಾಗಿ ಲಂಚ ಯಾರು ನೀಡುತ್ತಾರೆಯೇ ಅಂಥವರಿಗೆ ಬಹುಬೇಗ ಅಧಿಕಾರದಲ್ಲಿ ಉನ್ನತ ಬಡ್ತಿ ದೊರೆಯುತ್ತಾ ಬಹುಬೇಗನೇ ಪದವಿಯನ್ನಲಂಕರಿಸಿಕೊಳ್ಳುತ್ತಾರೆ. ಮೇಲಾಧಿಕಾರಿ ಲಂಚಕೋರನಾದರೆ ಕೆಳಗಣ ಅಧಿಕಾರಿಯ ಹುಳುಕುಗಳನ್ನೆಲ್ಲ ಮುಚ್ಚಿ, ಅವನನ್ನು ಪ್ರೋತ್ಸಾಹಿಸುತ್ತಾನೆ.

ಉಪಕುಲಸಚಿವ ರಾಘವ, ಹಾಸ್ಟೆಲ್ ವಾರ್ಡನ್ ಗಿರಿಜೆಯರನ್ನು ಕರೆಸಿ ಪಾಲಯ್ಯನ ಕತೆಯ ಗುಣವನ್ನೇಳಿಸುತ್ತಾಳೆ. ಪ್ರಯೋಗಾಲಯಕ್ಕೆ ತಗಡನ್ನು ಇಪ್ಪತ್ತೆಂಟುಸಾವಿರಕ್ಕೆ ತಂದಿತ್ತು. ಪ್ರಯೋಗಾಲಯದ ಮೆಕ್ಯಾನಿಕ್, ಗುಮಾಸ್ತ ಮತ್ತು ಜವಾನರು ಸೇರಿ ಇಪ್ಪತ್ತು ಸಾವಿರ ರೂ.ಗೆ ಮಾರಿ, ಬಂದದ್ದನ್ನು ಹಂಚಿಕೊಂಡರು, ಪಾಲಯ್ಯನವರಿಗೆ ಗೊತ್ತಾಗಲಿಲ್ಲ. ವಿಷಯ ತಿಳಿದು ತಂದು ಕೋಣೆಯಲ್ಲಿಡುವಂತೆ, ತಗಡನ್ನು ಮಾರಿಸಿ, ಬಂದ ದುಡ್ಡನ್ನು ಗುಳಂ ಮಾಡುತ್ತಾನೆ. ಇಲ್ಲಿ

ಜವಾನನಿಂದಿಡಿದು ಕುಲಪತಿಯವರೆಗೂ ಒಬ್ಬರಿಗೊಬ್ಬರು ತಮ್ಮತಮ್ಮಗೆ ವಂಚಿಸಿಕೊಂಡು ಲಂಚವನ್ನು ಸುಳಿಗೆ ಮಾಡುತ್ತಿದ್ದಾರೆ. ಸಿಂಡಿಕೇಟ್ ಸದಸ್ಯರೇ ಭ್ರಷ್ಟಾಚಾರಿಗಳಿಗೆ ನೆರವಾಗಿರುವಾಗ, ಭ್ರಷ್ಟಾಚಾರವನ್ನು ತಡೆಗಟ್ಟಲು ಸಾಧ್ಯವಿಲ್ಲ? ಇನ್ನು ನನ್ನಂಥ ಹೆಣ್ಣಿಂದಂತು ಸಾಧ್ಯವೇ ಇಲ್ಲ' ಎನ್ನುತ್ತಾಳೆ. "ಹೆಣ್ಣಾದರೇನು? ಗಂಡಾದರೇನು? ಇಂಥ ದುಷ್ಕೃತ್ಯಗಳನ್ನು ಸಜ್ಜನರು ತಡೆಯಲಾರರು, ಅದಕ್ಕೆಲ್ಲ ಕಠಿಣವಾದ ಮನಸ್ಸು ಛಲ ಸಂಕಲ್ಪಗಳಿರಬೇಕು. ಲಂಚ ರುಷುವತ್ತು ಯಾವಾಗಲೂ ಎಲ್ಲ ದೇಶಗಳಲ್ಲಿಯೂ ಇದ್ದದ್ದೇ ಎಂದು ಪ್ರಧಾನಿ ಇಂದಿರಾಗಾಂಧೀಯವರೇ ಸಾರುತ್ತಿದ್ದಾರೆ. ಹೀಗಿರುವಾಗ ರಾಜಾರೋಷಾಗಿ ರಾಜಕಾರಣಿಗಳು, ಅಧಿಕಾರಿಗಳು ಸಿಗ್ಗಿಲ್ಲದೆ ದರೋಡೆ ಮಾಡುತ್ತಾರೆ. ಮಂತ್ರಿಗಳೇ ಭ್ರಷ್ಟಚಾರಿಗಳಾಗಿರುವಾಗ, ಅರಣ್ಯಾದಿ ಸರ್ಕಾರಿ ಆಸ್ತಿಗಳನ್ನು, ತಾನ್ಸಿಭೂಮಿಯನ್ನು ಕಮಾಯಿಸಿಕೊಳ್ಳುವಾಗ, ಅವರನ್ನು ತಡೆಗಟ್ಟುವವರಾರು? ಒಬ್ಬ ಲೋಕಾಯುಕ್ತ ಏನು ತಾನೇ ಮಾಡಲಾದೀತು? ಅಪರಾಧಿಗಳಿಗವರು ಸೂಚಿಸುವ ಶಿಕ್ಷೆಯನ್ನು ಸರ್ಕಾರ ಮಾನ್ಯಮಾಡುವುದಿಲ್ಲ. ಒಂದು ಪಕ್ಷ ಮಾನ್ಯ ಮಾಡುವುದಾದರೆ ಅಪರಾಧಿಯನ್ನು ಬಿಡುಗಡೆಗೊಳಿಸಲು ಕೋರ್ಟ್ ಇದ್ದೆ ಇದೆ"[೧] ನಾನು ಅಧಿಕಾರದಲ್ಲಿದ್ದಾಗ, ಪರೀಕ್ಷೆಗೆ ಮುಂಚೆ ಇಂಜಿನಿಯರಿಂಗ್ ಪ್ರಶ್ನೆಪತ್ರಿಕೆ ವಿದ್ಯಾರ್ಥಿಗೆ ಸಿಕ್ಕಿ ನಾನೇ ಹಿಡಿದುಕೊಟ್ಟಾಗ, ಉಚ್ಛನ್ಯಾಯಾಲಯಕ್ಕೆ ಹೋದರೂ ತಪ್ಪಿತಸ್ಥನಲ್ಲವೆಂದು, ಜಾತಿ ಆಧಾರದ ಮೇಲೂ ಮೊಕದ್ದಮೆಗಳು ತೀರ್ಮಾನವಾಗುತ್ತದೆಂದು ತಿಳಿದು ತಮಗೆ ತುಂಬಾ ಸಂಕಟವಾಯಿತೆಂದು ಹೇಳುತ್ತಾರೆ.

ಗಿರಿಜಾ ಪಾಲಯ್ಯನ ಚಾಳಿಯನ್ನಾಡಲು ಆರಂಭಿಸಿ, ಅವನಿಗೆ ವಾರ್ಡನ್ ಸರೋಜ ಸಾಮೀಲೆಂದು, ಅವರಿಬ್ಬರಿಗೂ ಸಂಬಂಧವಿದೆಯೆಂದು ಗಾಳಿ ಸುದ್ದಿ ಹಬ್ಬುತ್ತದೆ. ಭೌತವಿಜ್ಞಾನ ವಿದ್ಯಾರ್ಥಿನಿಯೊಬ್ಬಳನ್ನು ಮರಳುಮಾಡಿ, ಒಂದು ದಿನದ ಮಟ್ಟಿಗೆ ಊಟಿಯಲ್ಲಿದ್ದು ಬಂದ ವಿಷಯವನ್ನು ಇಲಾಖೆಯ ಮುಖ್ಯಸ್ಥ ಹಿಂದಿನ ಕುಲಪತಿಗೆ ಪಾಲಯ್ಯನ ಚಾಳಿವರದಿ ಮಾಡಿದ, ಕುಲಪತಿ ನಿಮ್ಮ ಮೇಲೆ ವಿದ್ಯಾರ್ಥಿನಿಯ ದೂರನ್ನು, ತರಗತಿಗೆ ಸರಿಯಾಗಿ ಬರೋಲ್ಲ, ಪಾಠ ಸರಿಯಾಗಿ ಮಾಡಲ್ಲ. ಪ್ರಾಯೋಗಿಕ ತರಗತಿಗೆ ಚಕ್ಕರ್ ಇವು ಅವನ ಅನಾಮಧೇಯ ಆಪಾದನೆಗಳು ಬಂದಿವೆಯೆಂದು. ಅವಳು ಊಟಿ ತೋರಿಸೆಂದು ಬಲವಂತಪಡಿಸಿದಕ್ಕೋಸ್ಕರ ಅವಳ ಆಸೆಯನ್ನು ಈಡೇರಿಸಿದ್ದು ತಪ್ಪೇ? ಎಂದು ಪ್ರಶ್ನಿಸಿದಾಗ ಕುಲಪತಿಗೆ ನೀವು ಲಂಚ ಪಡೆದು ಗುಮಾಸ್ತರನ್ನು, ಜವಾನರನ್ನು

---

೧. ದೇಜಗೌ, ನಗ್ನ ಚಿತ್ರಗಳು, ವಿದ್ವತ್ಪ್ರಕಾನ, ಮೈಸೂರು, ೨೦೦೪, ಪುಟ. ೩೦.

ನೇಮಕ ಮಾಡುತ್ತಿರೆಂದು ಅಧ್ಯಾಪಕರ ಸಂಘಕ್ಕೆ ಪತ್ರವೊಂದು ಬಂದಿದೆ. ಏನು ಬೇಕಾದರೂ ಮಾಡಿರೆಂದೇಂದೇಳಿ ಬರುತ್ತಾನೆ.

ರಾಘವ ಪಾಲಯ್ಯ ವಿಜ್ಞಾನ ಪ್ರಾಧ್ಯಾಪಕನಾದರೂ, ಮಂತ್ರಮಾಟದಲ್ಲಿ ವಿಶ್ವಾಸವುಂಟು. ಬೆಟ್ಟಯ್ಯ ಜನಿಯಮ್ಮ, ವೆಂಕಟಯ್ಯ, ಸದಾಶಿವಶೆಟ್ಟಿ, ಇಂದ್ರಾಣಿಶೆಟ್ಟಿ ಇವರೆಲ್ಲರಿಗೂ ಮಾಟಮಂತ್ರಗಳ ಬಗ್ಗೆ ಹುಚ್ಚುಹಿಡಿಸಿದ್ದಾನೆ. ಇಲ್ಲಿ ವಿಜ್ಞಾನದ ಪ್ರಾಧ್ಯಾಪಕನಾಗಿ ಮೂಢನಂಬಿಕೆಗೆ ಒಳಗಾಗಿದ್ದಾನಲ್ಲ. ಇವನು ಸಮಾಜಕ್ಕೆ ಇನ್ನಷ್ಟು ಕಂಟಕಪ್ರಾಯನಾಗುತ್ತಾನೆಯೇ ಹೊರತು ಸಮಾಜ ಆರೋಗ್ಯಪೂರ್ಣವಾಗಿರಲು ಸಾಧ್ಯವಿಲ್ಲ. ಇದಿಷ್ಟೇ ಅಲ್ಲ ಪಾಲಯ್ಯನ ಗುಮಾಸ್ತ ಸೀನನಿಂದಾಗಿ ವೇಶ್ಯೆಯರ ಸಹವಾಸವನ್ನು ಮಾಡುತ್ತಾನೆ. ಇದರ ಜೊತೆಗೆ ಕುಡಿತದ ಸಂಗಾತಿಯಾಗುತ್ತಾನೆ. ಮುಂದೆ ಕುಲಪತಿಯಾದರೆ ವಿಶ್ವವಿದ್ಯಾನಿಲಯಗಳ ಪರಿಸ್ಥಿತಿ ಎಲ್ಲಿಗೆ ಬರುತ್ತದೋ ಈ ಪವಿತ್ರ ಸಂಸ್ಥೆಗೆ ಮುಂದೆ ಏನೇನು ಪೀಡೆ ಕಾದಿದೆಯೋ ದೇವರೆ ಕಾಪಾಡಬೇಕು' ಎಂದು ಧರ್ಮಪಾಲರು ಗದ್ಗದಿಸುತ್ತಾರೆ. ಇವರ ಮಾತಿನಲ್ಲಿ ಇವರನ್ನು ತಿದ್ದುವುದಕ್ಕೆ ಸಾಧ್ಯವಿಲ್ಲ. ದೇವರೆ ತಿದ್ದಬೇಕೆನ್ನುವ ರೀತಿಯಲ್ಲಿ.

ಪ್ರೊ. ದೇಜಗೌರವರ 'ಕಾದಂಬರಿ' ಕಾಲ್ಪನಿಕ ಕಾದಂಬರಿ ಎನಿಸಿದರೂ ವಾಸ್ತವಿಕನೆಲೆ, ಮನೋವೈಜ್ಞಾನಿಕ ನೆಲೆಗಳಲ್ಲಿ ಸಾಗುವ ಕಥೆಯನ್ನು ಒಳಗೊಂಡಿದೆ. ಕಾದಂಬರಿಯಲ್ಲಿ ಬರುವ ಉಪಶೀರ್ಷಿಕೆಗಳ ಅಡಿಯಲ್ಲಿ ಪ್ರಸ್ತಾಪಿತವಾಗಿರುವ ವಿಷಯಗಳು ಕಲ್ಪನೆಗಿಂತ 'ವಾಸ್ತವ ಪರಿಸ್ಥಿತಿ'ಯಲ್ಲಿ ನಡೆಯುತ್ತಿರಬೇಕೇನೋ ಎನಿಸಿಬಿಡುತ್ತದೆ. 'ಸಂಚು' 'ಪರೀಕ್ಷೆಗಳ ಹಗರಣ' 'ಕುಲಪತಿ ಹುದ್ದೆ ಮಾರಾಟಕ್ಕಿದೆ', ದುಷ್ಟರ ಕೈಗೊಂಬೆ ಆಸೆಬುರುಕ ಕುಲಪತಿ. ದಾರಿತಪ್ಪಿದ ಮೇಳಗಳು, ಅಮ್ಮಾವ್ರ ಗಂಡ, ಕುಲಪತಿಯ ಲೀಲಾವತಾರಗಳು, ಸರಸತಿಯ ದೇಗುಲದಲ್ಲಿ ಕೊಲೆ, ಕಾಳಿಕಾನಿಲಯ ಸಂಚುಗಳವಲಯ, ತಪ್ಪಿದ ಪಿಎಚ್.ಡಿ. ದುರಂತ, ಸತ್ಯಕ್ಕೆ ಅಂತಿಮ ಜಯ' ಶೀರ್ಷಿಕೆಗಳಲ್ಲಿ ಕಂಡುಬರುವ ಪ್ರಮುಖ ಅಂಶಗಳೆಂದರೆ ಶೀಲ ಶಿಕ್ಷಣದ ಹೆಗ್ಗುರಿಯಾಗಿರಬೇಕು; ಸಭ್ಯ ಸಮಾಜದ ನಿರ್ಮಾಣದಲ್ಲಿ ನೈತಿಕ ಶಿಕ್ಷಣದ ಮಹತ್ತ್ವ, ಮನುಷ್ಯ ಮನುಷ್ಯನಾಗೇ ಬಾಳುವ ಮೂಲಕ ಮಾನವೀಯತೆಯನ್ನು ಬೆಳೆಸಿಕೊಳ್ಳಬಲ್ಲ ಸಮರ್ಥ ಸಾಧನೆ ಸಂಪತ್ತು ಶಿಕ್ಷಣ ಸಂಪತ್ತಿನ ಪ್ರಾಮುಖ್ಯತೆ, ಶಿಕ್ಷಣ ಸಂಪತ್ತಿನಲ್ಲಿ ಅಪವಿತ್ರ ಗೈಯ್ಯುವ, ಅನಿಷ್ಟಕಾರಕ ಸಂದರ್ಭಗಳನ್ನು ಸೃಷ್ಟಿಸುವ, ರಾಜಕೀಯ ಬೆರಗುವ, ತಂತ್ರಗಾರಿಕೆ ರೂಪಿಸುವ, ಅನ್ಯಾಯ, ಅಸತ್ಯ, ಅತ್ಯಾಚಾರ, ಲಂಚ-ರುಷುವತ್ತುಗಳ ತೌರುಮನೆಯನ್ನಾಗಿಸುವ, ಪಕ್ಷಪಾತ ತೋರುವ, ಜಾತೀಯತೆಯನ್ನು ಬೆಳೆಸುವ ದೃಷ್ಟಿಕೋನ ಹೊಂದಿರುವ ಸಂಖ್ಯೆ ವಿಫಲವಾಗಿರುವ ಪ್ರಸ್ತುತ ದಿನಗಳಲ್ಲಿ ಶಿಕ್ಷಣದ ನಿರ್ದಿಷ್ಟವಾದ ಗುರಿ ಹೇಗೆ ಸಾಗಬೇಕಾಗಿದೆ ಎಂಬ

ಅಂಶಗಳನ್ನು ನಿದರ್ಶನ ಸಹಿತ ವಿವರಿಸಿದ್ದಾರೆ. 'ನಗ್ನ ಚಿತ್ರಗಳು' ಕಾದಂಬರಿ ಪ್ರಮುಖವಾಗಿ ನೈಜಶಿಕ್ಷಣ ದಿವಾಳಿಯತ್ತ ಸಾಗುತ್ತಿರುವುದನ್ನು ಸ್ಪಷ್ಟವಾಗಿ ಬಹಿರಂಗಗೊಳಿಸುತ್ತದೆ. ಕಾದಂಬರಿಯಲ್ಲಿ ಬರುವ ಪಾತ್ರಗಳು ಬೆಟ್ಟಯ್ಯ, ಕುಶಾಲಪ್ಪ, ಚಿಕ್ಕಣ್ಣ, ಜುನಿಯಮ್ಮ, ವೆಂಕಟಯ್ಯ, ಸಂಕಟೇಶ, ಪಾಲಯ್ಯ, ಸೇವಂತಿ ಈ ಪಾತ್ರಗಳ ಸಹಜವಾಗಿ, ಜೀವಂತವಾಗಿ, ಲೇಖಕರು ಚಿತ್ರಿಸಿರುವುದು ವೇದ್ಯವಾಗುತ್ತದೆ. ಈ ಪಾತ್ರಗಳನ್ನು ನೋಡಿದರೆ ಅಹಿತಕರ ಸನ್ನಿವೇಶಗಳ ಸೃಷ್ಟಿಕರ್ತರಾಗಿ ಗೆಲುವು ಸಾಧಿಸಿದವರು ಕೆಲವರಾದರೆ, ಅಪ್ರಬುದ್ಧ ಶಕ್ತಿ, ಅಪರಿಮಿತ ಕುಯುಕ್ತಿ, ಅಸಂಬದ್ಧ ಯುಕ್ತಿಗಳ ಮೂಲಕ ತಮ್ಮ ಬೇಳೆ ಬೇಯಿಸುವಲ್ಲಿ ಸಫಲರಾಗಿದ್ದಾರೆ. ಸಭ್ಯವಲ್ಲದ, ಸಹನೀಯವಲ್ಲದ, ಶುಭ್ರವಲ್ಲದ ಪ್ರತಿಯೊಂದನ್ನೂ, ವ್ಯಾಪಾರೀಕರಣಗೊಳಿಸಿಕೊಳ್ಳುವ, ದಿಢೀರ್ ಶ್ರೀಮಂತಿಕೆಗಾಗಿ ಬಾಯ್ದೆರೆದ, ಎಲ್ಲಾ ರೀತಿಯ ವಾಮಮಾರ್ಗಗಳನ್ನು ನೀತಿಯುತವೆಂದು ಭಾವಿಸಿದವರೇ ತುಂಬಿರುವ ಮಧ್ಯದಲ್ಲಿ ನೈತಿಕ ವ್ಯವಸ್ಥೆಗೆ ಆಸ್ಪದವೆಲ್ಲಿದೆ ಎಂದು ಕಾದಂಬರಿಕಾರರು ವಿಷಾದ ವ್ಯಕ್ತಪಡಿಸಿದ್ದಾರೆ.

ಒಟ್ಟಿನಲ್ಲಿ 'ನಗ್ನ ಚಿತ್ರಗಳು' ಆಕರ್ಷಣೀಯ ತಲೆಬರಹ ಹೊತ್ತ ಕಾಲ್ಪನಿಕ ಕಾದಂಬರಿ. ಓದುಗರಿಗೆ ಅಲ್ಲಲ್ಲೇ ಕುತೂಹಲ ತಣಿಸಬಲ್ಲ ಸನ್ನಿವೇಶ-ಗಳಿಂದೊಡಗೂಡಿದೆ, ಸಮರ್ಥಯುತನಾದ ಶಕ್ತಿಯುತವಾದ ಗದ್ಯಶೈಲಿ, ಸ್ವಾರಸ್ಯಕರ ನಿರೂಪಣೆ, ಸರಸೋಲ್ಲಾಸ ಶೈಲಿ-ಸಹೃದಯರಿಗೆ ಮುದ ನೀಡುವಲ್ಲಿ ಯಶಸ್ವಿಯಾಗಿದೆ. ವಿಶ್ವವಿದ್ಯಾನಿಲಯದಲ್ಲಿ ನಡೆಯುವ ಲೋಪದೋಷಗಳನ್ನು ಕುರಿತು ವಿಶಿಷ್ಟ ರೀತಿಯಲ್ಲಿ ಬಹಳ ಕುತೂಹಲಕಾರಿಯಾಗಿ ದೇಜಗೌ ಚಿತ್ರಿಸಿದ್ದಾರೆ. ನನ್ನ ಈ ಪ್ರಬಂಧದಲ್ಲಿ ದೇಜಗೌರವರ ಕಥೆಗಳಿಗೆ ಹೆಚ್ಚು ಚರ್ಚೆಗೆ ಒಳಪಡಿಸಿರುವುದರಿಂದ, ಕಾದಂಬರಿಯನ್ನು ಸ್ಥೂಲವಾಗಿ ಚರ್ಚಿಸಿದ್ದೇನೆ.

***

## ಅಧ್ಯಾಯ – ೫

# ಕಥಾಸಾಹಿತ್ಯದಲ್ಲಿ ಕಂಡುಬರುವ ಪ್ರಮುಖ ಅಂಶಗಳು

ನವೋದಯ ತಲೆಮಾರಿನ ಮೇರುಶಿಖರ ಕವಿವರೇಣ್ಯ ಕುವೆಂಪು ಅವರ ಹಾಗೆ ಪ್ರಾಧ್ಯಾಪಕ ನೆಲೆಯಿಂದ ಕುಲಪತಿ ಹುದ್ದೆಯಂತಹ ಉನ್ನತ ಹಂತದವರೆಗೆ ಶೈಕ್ಷಣಿಕ ವಲಯದ ಹಲವಾರು ಅನುಭವಗಳನ್ನು ಹೊಂದಿದವರು ಪ್ರೊ. ದೇಜಗೌ ಅವರು. ಕನ್ನಡಪರ ಚಿಂತಕರೂ ಶಿಕ್ಷಣಕ್ಷೇತ್ರದ ರೂವಾರಿಗಳು ಆಗಿರುವುದರಿಂದ ಇಡೀ ನಮ್ಮ ಸಾಹಿತ್ಯ ಮತ್ತು ಸಾಂಸ್ಕೃತಿಕ ಜಗತ್ತನ್ನು ಪರಾಮರ್ಶಿಸುವ ಶಕ್ತಿಯನ್ನು ಹೊಂದಿದ್ದಾರೆಂದೇ ಹೇಳಬಹುದು. ದೇಜಗೌ ಮುಖ್ಯವಾಗಿ ಗ್ರಾಮನೆಲೆಯಿಂದ ಬಂದವರಾದುದರಿಂದ ಗ್ರಾಮ ಬದುಕಿನ ಅತ್ಯಂತ ಸೂಕ್ಷ್ಮಗಳನ್ನು ಬಲ್ಲವರು. ನಗರದ ನೆಲೆಯಲ್ಲಿ ವಾಸವಾಗಿರುವುದರಿಂದ ಅಲ್ಲಿಯ ಸಂಕೀರ್ಣ ಹಾಗೂ ಸಂದಿಗ್ಧ ಪರಿಸರವನ್ನು ಗ್ರಹಿಸಬಲ್ಲರು. ಹಾಗಾಗಿ ದೇಜಗೌ ಅವರ ಕತೆಗಳಲ್ಲಿ ಈ ಎರಡೂ ನೆಲೆಗಳನ್ನು ಕಾಣಲು ಅರ್ಥೈಸಲು ಸಾಧ್ಯವಿದೆ. "ಜೀತ ಮತ್ತು ಇತರೆ ಕಥೆಗಳು" ಸಂಕಲನದ ಹನ್ನೆರಡು ಕತೆಗಳೂ ಒಂದಲ್ಲ ಒಂದು ವಿಧದಲ್ಲಿ ಈ ಎರಡೂ ನೆಲೆಗಳ ಸೂಕ್ಷ್ಮಗಳನ್ನು ಅಭಿವ್ಯಕ್ತಿಸುವಲ್ಲಿ ಕಲಾತ್ಮಕ ಯಶಸ್ಸು ಪಡೆಯುತ್ತವೆ. ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಮುಂತಾದ ಪರಿಸರದ ವಿವಿಧ ಮಗ್ಗುಲುಗಳು ಕತೆಗಳ ಆಂತರ್ಯವಾಗಿರುವುದರಿಂದ ಸಹಜ ಸುಲಭ್ಯ ಗ್ರಾಹ್ಯವಾಗಿದೆ. ಈ ಏರು ವಯಸ್ಸಿನಲ್ಲಿ ಕತೆಗಳನ್ನು ಬರೆದ ದೇಜಗೌ ಅವರ ಸೃಜನನೆಲೆಯ ಬಗೆಗೂ ಅತ್ಯಂತ ಕುತೂಹಲ ಮೂಡಿಬಿಡುವುದು ಸಹಜವೇ. ಭೂತದ ಸಂಗತಿಗಳು ವರ್ತಮಾನದೊಂದಿಗೆ ಜೊತೆಯಾಗಿದ್ದುಕೊಂಡೇ ಪುಟಿಯುವುದರಿಂದ ದೇಜಗೌ ಅವರ ಕತೆಗಳ ವ್ಯಾಪ್ತಿ ತುಂಬ ಹಿರಿದಾಗಿ ಕಾಣಿಸಬಲ್ಲದು.

ಜೀತ ಕತೆಯಲ್ಲಿ ಬರಗಾಲದ ಬೇಗೆಗೆ ತುತ್ತಾಗಿ ಕೂಲಿಯೂ ಸಿಗದೆ ಹಸಿದು ಕೊಂಡಿರಬೇಕಾದ ಆರು ಮಕ್ಕಳ ತಂದೆ ಮಾದಯ್ಯನ ಜೀವನ ಚಿತ್ರಣವಿದೆ. ರೂಪವತಿಯಾಗಿದ್ದರೂ ಮೂಗಿಯಾಗಿರುವ ತನ್ನ ಮಗಳನ್ನು ಜೀತಕ್ಕಿಡುವ ಸಂದರ್ಭ ಅವನಿಗೊದಗುತ್ತದೆ. ಜೀತಕ್ಕಿಟ್ಟುಕೊಂಡ ಪುಟ್ಟಪ್ಪಗೌಡ ಅವಳ ಸೌಂದರ್ಯವನ್ನು ನೋಡಿ ಅವಳಿಂದ ಸುಖಪಡಬೇಕೆಂಬ ಆಸೆಯಿಂದ ಇರುತ್ತಾನೆ. ಗ್ರಾಮೀಣ ಪರಿಸರವೇ ಇರದಲ್ಲಿದ್ದು ಜೀತದ ಮೂಲಕ ಶ್ರೀಮಂತರು ಬಡವರನ್ನು

ಹೇಗೆ ದುಡಿಸಿಕೊಳ್ಳುವರೆಂಬ ವಿವರಗಳಿವೆ. ಚಿಕ್ಕದಾಗಿ ಬರುವ ಕೆಂಪ-ಕೆಂಪಿ ಇವರ ಪ್ರೀತಿ ಮಿತವಾಗಿದ್ದರೂ ಸೊಗಸಾಗಿ ಚಿತ್ರಣಗೊಂಡಿದೆ.

ವಿಶ್ವಾಸದ್ರೋಹ: ಕತೆಯಲ್ಲಿ ಕಿಟ್ಟನೆಂಬ ನೈತಿಕ ಅಧಃಪತನಕ್ಕೆ ಬಿದ್ದ ವ್ಯಕ್ತಿಯ ಚಿತ್ರಣವಿದೆ. ಕಿಟ್ಟನಂತಹ ವ್ಯಕ್ತಿಗೆ ಎಷ್ಟೋ ಸಹಾಯಮಾಡಿದರೂ ಅವರು ಜೀವನದಲ್ಲಿ ಪಾಠ ಕಲಿಯಲಾರರು ಎಂದು ಹೇಳುವ ಪ್ರಯತ್ನವಿದೆ. ಮಗ ಕೆಡಲು ತಂದೆತಾಯಿಯಂದಿರು ಕಾರಣವೆಂಬ ಅಂಶವನ್ನು ಸೂಕ್ಷ್ಮವಾಗಿ ನಿರೂಪಿಸಲಾಗಿದೆ. ಅವನ ಯೋಗ್ಯತೆಗೆ ತಕ್ಕುದಲ್ಲದ ಕೆಲಸವನ್ನು ನಿರ್ವಹಿಸಲು ಕೊಟ್ಟರೆ ಅಸಾಧ್ಯ ಎನ್ನುವ ಸಂದೇಶವೂ ಇಲ್ಲಿದೆ. ಯಜಮಾನರ ಹಿರಿಯರಾದವರ ಕ್ಷಮಾಗುಣ ಹಾಗೂ ಅದರ ದುರುಪಯೋಗವೂ ಇಲ್ಲಿ ವ್ಯಕ್ತವಾಗಿದೆ. ಒಂದು ಸಂಸ್ಥೆಯನ್ನು ಕಟ್ಟಿ ಬೆಳೆಸಿದ ವ್ಯಕ್ತಿ ಹಲವು ಜನಮಾಡಿದ ಮೋಸದಿಂದ ಚಿಂತಿಗೊಳಗಾಗುತ್ತಾನೆ. ಕೊನೆಗೆ ಖಾಯಿಲೆಯಿಂದ ಬಳಲುತ್ತಾನೆ. ಆಗ ಅವನಿಗೆ ಮೋಸ ಮಾಡಿದ ವ್ಯಕ್ತಿಗಳು ಹರ್ಷಪಡುತ್ತಾರೆಂಬಂತೆ ಕತೆಯ ಅಂತ್ಯವಿದೆ.

ಸೌಂದರ್ಯವೆ ಹಗೆ ಅದೆ ಬದುಕಿನ ಪಾವಟಿಗೆ: ಎಂಬ ಕತೆ ವಾಸ್ತವ ಸಂಗತಿಯೇನೋ ಎಂಬಂತೆ ನಿರೂಪಿತಗೊಂಡಿದೆ. ಅವರ ಸೌಂದರ್ಯವೆ ಅವರಿಗೆ ಹಗೆಯಾದರೂ ಅವರ ಬದುಕಿನ ಪಾವಟಿಗೆಯಾಗುತ್ತದೆ. ಅದೇ ಅವರ ಜೀವನದ ಯಶಸ್ಸಿಗೂ ಸಾರ್ಥಕತೆಗೂ ನಿಮಿತ್ತವಾಗುತ್ತದೆ; ಸಿದ್ದಪ್ಪಾಜಿಯ ಬದುಕಿನ ನೆಲೆಯನ್ನು ಅದರ ಮೂಲಕ ಸೌಂದರ್ಯಾರಾಧನೆಯ ತಾತ್ತ್ವಿಕ ನೆಲೆಗಳನ್ನು ಇಲ್ಲಿ ಶೋಧಿಸಲಾಗಿದೆ.

'ತಾಯಿಮಗು' ಕತೆಯಲ್ಲಿ ಹೆಣ್ಣು ತ್ಯಾಗಮಯಿಯಾಗಿ ಚಿತ್ರಿತಳಾಗಿದ್ದಾಳೆ. ಪುಸ್ತಕದ ಬಗೆಗೆ ಸ್ವಲ್ಪವೂ ಆಸಕ್ತಿ ಇಲ್ಲದ ಮಗನನ್ನು ಆ ಕಡೆಗೆ ಸೆಳೆದು ದೊಡ್ಡ ವ್ಯಕ್ತಿಯನ್ನಾಗಿ ಮಾಡುವ ತಾಯಿ ಇಲ್ಲಿ ಪೂಜ್ಯಳಾಗುತ್ತಾಳೆ. ಹೆಣ್ಣಾದವಳು ತನ್ನ ಮಕ್ಕಳನ್ನು ಸರಿಯಾದ ರೀತಿಯಲ್ಲಿ ಬೆಳೆಸಿ ಸಮಾಜದಲ್ಲಿ ಗಣ್ಯವ್ಯಕ್ತಿಯನ್ನಾಗಿ ಮಾಡಿದರೆ ಅದೇ ನೂರು ಕೃತಿಯನ್ನು ಸಮಾಜಕ್ಕೆ ಕೊಟ್ಟಂತೆ ಎಂಬುದು ಇಲ್ಲಿಯ ಆಶಯ.

'ಕುರುಡುತಂದೆ': ಕತೆಯಲ್ಲಿ ಮಗ ತನ್ನ ತಂದೆಯ ಸಲುವಾಗಿ ಕಾಳಜಿವಹಿಸುತ್ತಾನೆ. ಅಪ್ಪನ ಕೃಷಿ ಸಂಸ್ಕೃತಿಯಲ್ಲಿ ಅನಾವರಣಗೊಳ್ಳುತ್ತದೆ. ಆ ಮುಖೇನ ಗ್ರಾಮೀಣ ಬದುಕಿನ ವಿವಿಧ ಮುಖಗಳು ಅರಳುತ್ತವೆ. ತಂದೆತಾಯಂದಿರ ಪ್ರೀತಿವಾತ್ಸಲ್ಯಗಳನ್ನು ತಿಳಿಸುವ ಈ ಕತೆ ಕುರುಡನಾದ ತಂದೆಯ ಮಮತೆಯನ್ನು ಸಾದರಪಡಿಸುತ್ತದೆ.

'ವೀರಣ್ಣನ ಮದುವೆ'ಯಲ್ಲಿ ಸರ್ಕಾರಿ ಉದ್ಯೋಗದಲ್ಲಿದ್ದು ಉತ್ತಮ ಸಂಬಳ ಪಡೆಯುತ್ತಿದ್ದರೂ ತನ್ನ ಕಪ್ಪು ಬಣ್ಣದ ಕಾರಣವಾಗಿ ಯಾವುದೇ ಹೆಣ್ಣು ತನ್ನನ್ನು ಮದುವೆಯಾಗಲು ಮುಂದೆ ಬರದ ವ್ಯಕ್ತಿಯೊಬ್ಬನ ಕತೆ. ಗೆಳೆಯನ ಸಹಾಯದಿಂದ ವೀರಣ್ಣ ಕಪ್ಪು ಬಣ್ಣದ ಇನ್ನೊಬ್ಬ ಶಿಕ್ಷಕಿಯನ್ನು ಮದುವೆಯಾಗುತ್ತಾನೆ. ಇಲ್ಲಿಯ ಸಮಸ್ಯೆ ಎಂದರೆ ಇಬ್ಬರೂ ಕಪ್ಪುಬಣ್ಣದವರಾದರೆ ತಮಗೆ ಹುಟ್ಟುವ ಮಕ್ಕಳು ಕಪ್ಪಾಗಿ ಮುಂದೆ ಅವರೂ ನಮ್ಮಂತೆ ಅನುಭವಿಸಬಾರದೆಂಬುದೇ ಆಗಿದೆ. ಅದಕ್ಕಾಗಿ ಮದುವೆಗೆ ಮೊದಲೇ ತಮಗೆ ಮಕ್ಕಳು ಬೇಡ ಎಂಬ ತೀರ್ಮಾನಕ್ಕೆ ವೀರಣ್ಣ ಮತ್ತು ಪದ್ಮಿನಿ ಬರುತ್ತಾರೆ. ವರ್ಣದ ಸಮಸ್ಯೆಯ ಭಾಗವಾಗಿ ಪುರಾಣ, ಸಾಹಿತ್ಯ, ಚರಿತ್ರೆ ಮತ್ತು ಸಮಾಜದ ಸಂಗತಿಗಳೆಲ್ಲ ಹಾದುಹೋಗುವುದರಿಂದ ಚಿಂತನೆಗೆ ಹೊಸ ಗ್ರಾಸ ಒದಗಿದಂತಾಗಿದೆ.

ಸ್ವರ್ಗದವರು ಧರೆಗಿಳಿದಾಗ: ಕತೆಯಂತೂ ಜಾಗತಿಕ ಸಾಹಿತ್ಯವನ್ನು ಪರಿಚಯಿಸು-ವಂತಿದೆ. ತಂತ್ರದ ದೃಷ್ಟಿಯಿಂದಲೂ ಗಮನಸೆಳೆಯುವ ಈ ಕತೆ ಕನ್ನಡಾಭಿಮಾನ-ವನ್ನು ಪ್ರಕಟಿಸುವಂಥದ್ದು. ಅಗೋಚರ ಲೋಕದಲ್ಲಿರುವ ಬಿ.ಎಂ.ಶ್ರೀ. ಅನಕೃ ಅವರು ಷೇಕ್ಸ್‌ಪಿಯರ್ ಖಲೀಲ್ ಗಿಬ್ರಾನ್ ಮುಂತಾದವರ ಜೊತೆ ಬಂದು ಇಡೀ ಪ್ರಪಂಚದ ಎಲ್ಲಾ ಭಾಷೆಯ ಸಾಹಿತ್ಯವನ್ನು ಅವುಗಳು ಈಗಿರುವ ಸ್ಥಿತಿಯನ್ನು ನೋಡುತ್ತ ಪರಿಶೀಲನೆ ಮಾಡುವ ರೀತಿ ಕುತೂಹಲಕಾರಿಯಾದುದ್ದು; ಆಗ 'ಕನ್ನಡ ಅಭಿವೃದ್ಧಿ ಪ್ರಾಧಿಕಾರ' ಎಂಬ ನಾಮಫಲಕವನ್ನು ಕಂಡ ಷೇಕ್ಸ್‌ಪಿಯರ್ ಆ 'ಬೋರ್ಡ್ ಏಕೆ' ಎಂದು ಕೇಳುತ್ತಾನೆ. ಆಗ ಬಿ.ಎಂ.ಶ್ರೀ. ಅನಕೃ ಕೊಡುವ ಉತ್ತರಗಳು ದೇಜಗೌ ಅವರ ಉತ್ತರಗಳಾಗಿ ಅಪ್ಪಟ ಕನ್ನಡಾಭಿಮಾನದ ದ್ಯೋತಕಗಳಾಗಿ ಗೋಚರವಾಗುವುದು ವಿಶೇಷ ಸಂಗತಿ. ಬಂಗಾಳಿ, ತಮಿಳು ಭಾಷಿಕರಿಗಿರುವಂತೆ ಕನ್ನಡಿಗರಿಗೆ ಭಾಷಾಭಿಮಾನವಿಲ್ಲ ಎನ್ನುತ್ತಾರೆ. ಇಲ್ಲಿ ದೇಜಗೌರವರ ಕನ್ನಡದ ಬಗೆಗಿನ ಅಭಿಮಾನ ಹಾಗೂ ಅದರ ಬಗೆಗಿನ ಕಳಕಳಿಯನ್ನು ಗುರುತಿಸಬಹುದು. ಸೃಜನನೆಲೆಯೊಂದರಲ್ಲಿ ಸಾಹಿತ್ಯದ ಸಂವಾದ ನಡೆಸುವ ಆ ಮೂಲಕ ಭಾಷಾಭಿಮಾನವನ್ನು ಪ್ರಕಟಪಡಿಸುವ ಅಪರೂಪದ ಕತೆಯಿದು. ಇಂಥ ಕಲೆಗಾರಿಕೆ ಕನ್ನಡಪರ ಚಿಂತನೆಯಲ್ಲಿ ಸದಾ ತೊಡಗುತ್ತ ಬಂದ ದೇಜಗೌ ಅವರಂಥ ಬರಹಗಾರರಿಗೆ ಮಾತ್ರ ಸಿದ್ದಿಸುವಂಥದ್ದು.

'ಅಜ್ಞಾತ ಸತ್ಯಾರಾಧಕ': ಪ್ರಾಮಾಣಿಕ ಅಧಿಕಾರಿ ವೆಂಕಟರಾಮಯ್ಯನವರ ವ್ಯಕ್ತಿತ್ವ ಹಾಗೂ ಭ್ರಷ್ಟ ವ್ಯವಸ್ಥೆಯ ವಿವಿಧ ಮುಖಗಳ ಚಿತ್ರಣ – ಈ ಎರಡೂ ಅಭಿವ್ಯಕ್ತವಾಗಿದೆ. ಪ್ರಾಮಾಣಿಕರನ್ನು ಅಪ್ರಾಮಾಣಿಕರನ್ನಾಗಿಸುವ ಪ್ರಯತ್ನವೇ

ಜಾಸ್ತಿಯಾಗಿರುವ ಸಂದರ್ಭದಲ್ಲಿ 'ಸತ್ಯವಂತರಿಗಿದು ಕಾಲವಲ್ಲ' ಎಂಬುದನ್ನು ದೃಢಪಡಿಸುತ್ತದೆ.

'ಸತ್ಯವಂತರಿಗಿದು ಕಾಲವಲ್ಲ': ಹಿಂದಿನ ಕತೆ ಮತ್ತು ಈ ಕತೆಯ ಒಳವಿವರಗಳಲ್ಲಿ ಸಂಬಂಧವಿರುವುದನ್ನು ಕಾಣಬಹುದು. ಅಲ್ಲದೆ ಒಂದೆ ಸಮಸ್ಯೆಯ ವಿಭಿನ್ನ ಮುಖಗಳನ್ನು ಗುರುತಿಸಲು ದೇಜಗೌ ಪ್ರಯತ್ನಿಸಿದಂತಿದೆ. ಪ್ರಾಮಾಣಿಕ ವ್ಯಕ್ತಿಯಾದ ಹೊಂಬಯ್ಯ ನಗರಪಾಲಿಕೆಯಲ್ಲಿ ಅಧಿಕಾರಿಯಾಗಿ ಉತ್ತಮ ಆಡಳಿತ ನಡೆಸುತ್ತಾನೆ. ಆದರೆ ಅವನ ಪ್ರಾಮಾಣಿಕತೆಗೆ ಸಮಾಜದ ಜನರಿಂದ ಉತ್ತಮ ಬೆಂಬಲ ದೊರೆಯುವುದಿಲ್ಲ. ಅವನ ಪ್ರಾಮಾಣಿಕತೆಗೆ ಮುಖ್ಯಮಂತ್ರಿಗಳಿಂದ, ತನ್ನ ಮಡದಿ ಮಕ್ಕಳಿಂದ ಬೆಂಬಲ ದೊರೆಯುತ್ತದೆ. ಆದರೆ ಅದೇ ನಗರಪಾಲಿಕೆಯಲ್ಲಿ ಕೆಲಸ ಮಾಡುತ್ತಿದ್ದು ಹಿಂದೆ ಲಂಚ ಸ್ವೀಕರಿಸುತ್ತಿದ್ದ ಅಧಿಕಾರಿಗಳಿಗೆ ಮಾತ್ರ ಇವನನ್ನು ಕಂಡರೆ ಆಗುವುದಿಲ್ಲ. ಸದಾ ತನ್ನ ಆಡಳಿತದ ಬಗ್ಗೆಯೇ ಆಲೋಚಿಸುತ್ತಾ ದೇಹ ಕೃಶವಾಗುತ್ತದೆ. ಅಂತಿಮವಾಗಿ ಅವನು ನಿವೃತ್ತಿ ಹೊಂದುತ್ತಾನೆ. ಅಪ್ರಾಮಾಣಿಕರನ್ನು ಮಟ್ಟಹಾಕಲು ಮೇಯರ್ ಸ್ಥಾನಕ್ಕೆ ಚುನಾವಣೆಗಾಗಿ ನಿಲ್ಲಲು ಪ್ರಯತ್ನಿಸುತ್ತಾನೆ. ಮೇಯರ್ ಸ್ಥಾನಕ್ಕೆ ವಿವಿಧ ಪಕ್ಷಗಳ ಟಿಕೆಟ್ ಕೇಳುತ್ತಾನೆ. ಕೊನೆಗೆ ಯಾವ ಪಕ್ಷವು ಟಿಕೆಟ್‌ಕೊಡದೆ ಅವನು ಸ್ವತಂತ್ರ ಅಭ್ಯರ್ಥಿಯಾಗಿ ನಿಲ್ಲುತ್ತಾನೆ. ಪ್ರಾಮಾಣಿಕನೆಂದು ಹಿಂದೆ ಮೆಚ್ಚಿಕೊಂಡಿದ್ದ ಜನತೆ ಅವನಿಗೆ ಓಟು ಹಾಕುವುದಿಲ್ಲ. ಅವನು ಗೆಲ್ಲುವುದಿಲ್ಲ. ಹಾಗಾಗಿ ಇದು 'ಸತ್ಯವಂತರಿಗಿದು ಕಾಲವಲ್ಲ'ವೆಂಬುದು ದೃಢವಾಗಿಬಿಡುತ್ತದೆ.

ಹೆಣ್ಣಿಗೆ ಹೆಣ್ಣೆ ಹಗೆ: ಕತೆಯಲ್ಲಿ ವರಲಕ್ಷ್ಮಿ ಎಂಬ ಹೆಣ್ಣು ಬಡತನದಲ್ಲಿಯೇ ಕಷ್ಟಪಟ್ಟು ವ್ಯಾಸಂಗ ನಡೆಸಿ ಸಂಶೋಧನೆ ಮುಗಿಸುವವರೆಗಿನ ಕತೆ. ಆನಂತರ ಅವಳು ಮದುವೆಯಾಗುವವರೆಗೂ ಹರಡಿಕೊಂಡಿದೆ. ಅವಳು ವ್ಯಾಸಂಗ ಮಾಡುತ್ತಿದ್ದಾಗ 'ಇವಳೇನು ಓದಿ ಮೇಡಮ್ಮ ಆಗ್ತಾಳೇನೋ, ತಹಶೀಲ್ದಾರ್‌ಳಾಗ್ತಾಳೇನೋ' ಎಂದು ಲೇವಡಿ ಮಾಡುವವರು ಊರಿನ ಹೆಂಗಸರು. ನಂತರ ಮನೆಯಲ್ಲಿದ್ದ ತಮ್ಮನ ಹೆಂಡತಿ ಇವಳನ್ನು ನೋಡಿ ಸಹಿಸಿಕೊಳ್ಳಲಾರದೆ ಮಾತನಾಡುವ ಮಾತುಗಳು ಹಾಗೆಯೇ ಮದುವೆಯಾಗಿ ಅತ್ತೆ ಮನೆ ಸೇರಿದಾಗ ಇವಳು ತರುವ ಸಂಬಳಕ್ಕಾಗಿ ಹಾತೊರೆಯುವ ಅತ್ತೆ – ಹೀಗೆ ಹಲವು ರೀತಿಯಲ್ಲಿ ಕತೆ ಬಿಚ್ಚಿಕೊಳ್ಳುತ್ತಾ ನಡೆದು ಹೆಣ್ಣಿಗೆ ಅವಳ ಅಭಿವೃದ್ಧಿಯ ಕಡೆಗೆ ಹೆಣ್ಣೇ ಮಾರಕ ಎಂಬುದನ್ನು ದೃಢಪಡಿಸಲಾಗಿದೆ.

ಮರಿಲಿಂಗಯ್ಯನ ದಶಾವತಾರ: ಸಮಾಜದಲ್ಲಿನ ಪುಂಡನೊಬ್ಬನನ್ನು ಕುರಿತು ಬರೆದಿರುವ ಕತೆ. ಮರಿಲಿಂಗಯ್ಯ ಪಟ್ಟಣ ಸೇರಿ ಕೆಡುತ್ತಾನೆ. ತನಗಿರುವ ಬುದ್ಧಿಯನ್ನು ಉಪಯೋಗಿಸಲು ಶುರುಮಾಡುತ್ತಾನೆ. ರೈಲ್ವೆಸ್ಟೇಷನ್ನಿನಲ್ಲಿ ಲಗೇಜು ಹೊರುವ ಕಾಯಕದಿಂದ ಆರಂಭಿಸಿ ಹೋಟೆಲ್‌ನಲ್ಲಿ ತಟ್ಟೆಲೋಟ ತೊಳೆಯುವ ಕಾಯಕಕ್ಕೆ ಬಡ್ತಿ ಪಡೆದು ಕೆಲಸವನ್ನು ದುರುಪಯೋಗಪಡಿಸಿಕೊಂಡು ಸಣ್ಣ ಹಿಡುವಳಿದಾರರಿಗೆ ಭಯ ಹುಟ್ಟಿಸಿ ಕಡಿಮೆ ಬೆಲೆಗೆ ಅವರ ಜಮೀನನ್ನು ವಶಪಡಿಸಿಕೊಂಡು ನಂತರ ಅಲ್ಲಿಯೇ ಒಂದು ತೋಟಮಾಡಿ ಅಲ್ಲಿ ಗೆಸ್ಟ್ ಹೌಸ್ ಕಟ್ಟಿಸಿ ದೊಡ್ಡ ದೊಡ್ಡ ರಾಜಕಾರಣಿಗಳ ಪರಿಚಯಮಾಡಿಕೊಂಡು ನಂತರ ಅನ್ಯಮಾರ್ಗಗಳನ್ನು ಅನುಸರಿಸಿ ಬೆಂಗಳೂರಿನ ಶ್ರೀಮಂತರಲ್ಲೊಬ್ಬನಾಗುತ್ತಾನೆ. ನಂತರ ಸ್ವಾಮೀಜಿಯೊಬ್ಬರನ್ನು ಪರಿಚಯ ಮಾಡಿಕೊಳ್ಳುತ್ತಾನೆ. ಈ ಮಧ್ಯೆ ತನ್ನ ಹೆಂಡತಿಯ ತಂಗಿಯೊಂದಿಗೆ ಅಕ್ರಮ ಸಂಬಂಧ ಹೊಂದಿ ಕೊನೆಗೆ ಅವಳನ್ನು ಮದುವೆಯಾಗಿ ಅವಳೊಂದಿಗೆ ಸ್ವಾಮೀಜಿಯ ಸಂಬಂಧವೇರ್ಪಡಿಸಿ ಅವಳಲ್ಲಿ ಹುಟ್ಟಿದ ಮಗನಿಗೆ ಸ್ವಾಮೀಜಿಯ ಮಠದ ಉತ್ತರಾಧಿಕಾರಿಯ ಸ್ಥಾನವನ್ನು ಕೇಳುತ್ತಾನೆ. ಹೀಗೆ ರೀತಿ ನೀತಿ ಇಲ್ಲದಂತೆ ಮರಿಲಿಂಗಯ್ಯ ತನ್ನ ಜೀವನವನ್ನು ನಡೆಸುತ್ತಾನೆ.

ಸರಳವಾದ ಶೈಲಿಯಲ್ಲಿ ಮೂಡಿಬಂದಿರುವ ಇಲ್ಲಿಯ ಕತೆಗಳ ಚಟುವಟಿಕೆಗಳಲ್ಲಿ ಜರುಗುವುದು ಗ್ರಾಮ ಮತ್ತು ನಗರದ ಭೂಮಿಕೆಗಳಲ್ಲಿ. ಬಹುಪಾಲು ಪಾತ್ರಗಳಲ್ಲಿ ಅವರ ಮನಸ್ಸುಗಳಲ್ಲಿ ಕೆಲಸ ಮಾಡುವುದು ಮಾತ್ರ ಜಾನಪದ ಮನೋಧರ್ಮವೇ ಆಗಿದೆ. ಜೀವನದಲ್ಲಿ ಕೆಟ್ಟ ಕೆಲಸ ಮಾಡಿದ ವ್ಯಕ್ತಿಗಳಿಗೆ ಅಂತ್ಯದಲ್ಲಿ ಕೆಟ್ಟದ್ದೇ ಆಗುತ್ತದೆಂಬ ನಂಬಿಕೆ ಇದೆ. ಹಾಗೆಯೇ ಬೇರೆಯವರಿಗೆ ತೊಂದರೆ ಕೊಟ್ಟರೂ ಅವರು ತತ್ಕಾಲದಲ್ಲಿ ಸಂತೋಷ-ದಿಂದಿರಬಹುದು. ಅಂತಿಮವಾಗಿ ಅವರಿಗೂ ತೊಂದರೆಯಾಗುತ್ತದೆಂಬ ಭಾವನೆ ಜನಪದರಲ್ಲಿದೆ. ಒಳ್ಳೆಯವರೆನಿಸಿಕೊಂಡು ಉತ್ತಮ ಜೀವನ ನಡೆಸಿದ ವ್ಯಕ್ತಿಗಳಿಗೂ ಅಂತಿಮವಾಗಿ ಕೆಟ್ಟರೀತಿಯ ಸಾವು ಲಭಿಸಿರುವುದುಂಟು. 'ಜೀತ' ಕಥೆಯಲ್ಲಿಂದ ಹಿಡಿದು 'ಮರಿಲಿಂಗಯ್ಯನ ಏಕದಶಾವತಾರ' ಕತೆಯವರೆಗೂ ಹೀಗೆಯೇ ಆಗಿದೆ. ಪಾಪಕ್ಕೆ ತಕ್ಕ ಪ್ರಾಯಶ್ಚಿತ ಆಗೇ ಆಗುತ್ತದೆ. ಫಲಾಫಲಗಳನ್ನೆಲ್ಲ ಅನುಭವಿಸಲೇ ಬೇಕಾಗುತ್ತದೆಂಬುದನ್ನು ಜಾನಪದ ವಲಯದಲ್ಲಿ ಸಾಮಾನ್ಯವಾಗಿ ಕೇಳಿದ್ದೇವೆ. ಗ್ರಾಮೀಣ ನೆಲೆಯಿಂದ ಬಂದ ದೇಜಗೌ ಅವರು ಜಾನಪದ ವಿದ್ವಾಂಸರೂ ಆಗಿರುವುದರಿಂದ ಜಾನಪದದ ಸೂಕ್ಷ್ಮಗಳನ್ನು, ಆಶಯಗಳನ್ನು ತಮ್ಮ ಈ ಕತೆಗಳಲ್ಲಿ

ಬಳಸಿ ಅವುಗಳಿಗೆ ಕಲಾತ್ಮಕತೆ ತಂದುಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಅಲ್ಲಲ್ಲಿ ಬಳಕೆಯಾಗಿರುವ ಗಾದೆಗಳು, ನಾಣ್ಣುಡಿಗಳು, ಜನಪ್ರಿಯ ಮಾತುಗಳು ಆಯಾ ಸಂದರ್ಭಗಳನ್ನು ಗಟ್ಟಿಗೊಳಿಸಲು ನೆರವಾಗಿವೆ.

೨೦೦೧ರಲ್ಲಿ ಹೊರಬಂದ ಇವರ 'ದೇವರಮಗು ಮತ್ತು ಇತರ ಕಥೆಗಳು' ಸಂಕಲನ ನಿರ್ದೇಶಿಸಿದ್ದು ಇಂಥ ತಾತ್ತ್ವಿಕ ನಿಲುವಲ್ಲೆ. ಈ ಎಲ್ಲ ಕಥೆಗಳಲ್ಲೂ ಭಾವ ಸಮೃದ್ಧಿ, ವಿಷಯ ಸಮೃದ್ಧಿ, ಎದ್ದುಕಾಣುವುದನ್ನು ನಾವು ಗುರುತಿಸಬಹುದು. ಜೊತೆಗೆ ಅವರ ಸೂಕ್ಷ್ಮದೃಷ್ಟಿಯ, ವಾಸ್ತವ ಶ್ರೀಮಂತಪ್ರಜ್ಞೆಯ ವೈವಿಧ್ಯಮಯ ಜೀವನಾವಲೋಕನದ ಕಲ್ಪನಾ ವಿಲಾಸವು, ತೀವ್ರಪರಿಣಾಮಕಾರಿಯಾಗಿ ಮೂಡಿಬಂದಿರುವುದನ್ನು ಗಮನಿಸಬಹುದು.

'ದೇವರ ಮಗು ಮತ್ತು ಇತರ ಕಥೆಗಳು' ಈ ಕಥಾಸಂಕಲನದಲ್ಲಿ ಒಟ್ಟು ಇಪ್ಪತ್ತೈದು ಕಥೆಗಳಿವೆ. ಈ ಕಥೆಗಳು ದೇಜಗೌ ಅವರ ಮೊದಲ ಕಥೆಯಾದರೂ ಕೂಡ ಕಥೆಗಳಲ್ಲಿ ಗಟ್ಟಿತನವಿದೆ. ಬನಿಯಿದೆ. ರಸವಿದೆ, ಔಚಿತ್ಯವಿದೆ ಎಂಬುದನ್ನು ಕಥೆಗಳನ್ನು ಗಮನಿಸಿದಾಗ ತಿಳಿಯುತ್ತದೆ. ಕತೆಯಿಂದ ಕತೆಗೆ ಪಾತ್ರಗಳಲ್ಲಿ, ವರ್ಣನೆಯಲ್ಲಿ ಜೀವಂತಿಕೆಯ ಅಂಶ ಪುಟಿಯುತ್ತದೆ. ಇಲ್ಲಿರುವ ಪ್ರತಿಯೊಂದು ಕಥೆಗಳಲ್ಲೂ 'ನಮ್ಮ ಕಣ್ಮುಂದಿನ ಸಮಾಜದ, ನಮ್ಮ ಊರಿನ ಸುತ್ತಲ ಬದುಕಿನಿಂದ ನೇರವಾಗಿ ಎದ್ದು ಬರುವಂತೆ ಪಾತ್ರಗಳನ್ನು ದೇಜಗೌ ಪಡಿಮೂಡಿಸಿರುವುದನ್ನು ಕಾಣಬಹುದು.

ಈ ಸಂಕಲನದಲ್ಲಿ ಬರುವ ಕಥೆಗಳ ಮುಖ್ಯ ಕಥಾವಸ್ತುವೆಂದರೆ ಕಂಡು ಕೇಳಿದಂತೆ ಭಾಸವಾಗುತ್ತವೆ. ನಮ್ಮ ಅಕ್ಕಪಕ್ಕದ ಮನೆಯವೊ ಎಂಬಂತೆ, ನಾವೇ ಅನುಭವಿಸಿದಾಗ, ಕಂಡು ಕೇಳಿದಾಗ ಸಂಗತಿಗಳು ಇಲ್ಲಿ ಮುಖ್ಯವಾಗಿ ರಂಜಿಸುತ್ತ ಹೋಗುತ್ತವೆ. ಒಟ್ಟಿನಲ್ಲಿ ದೇಜಗೌ ಅವರ ಸೃಜನಶೀಲ ಲೇಖನಿಯ ಮೂಸೆಯಲ್ಲಿ ಕೆಲಸಮಾಡಿ ಯಶಸ್ವಿಯಾಗಿರುವುದೂ ಗಮನಾರ್ಹವಾದದ್ದು. ಇಲ್ಲಿಯ ಕೆಲವು ಕಥೆಗಳಲ್ಲಿ ಇವರ ಪ್ರತಿಭೆಯ ಹೊಳಪು, ಮನಸ್ಸು ಪಾಕಗೊಂಡು ವಾಸ್ತವಸ್ಥಿತಿಗೆ ಸ್ಪಂದಿಸಿ, ವಾಸ್ತವತೆಯ ಕಡೆಗೆ ಚಲಿಸುತ್ತಾ ಹೋಗುವುದಷ್ಟೇ ಅಲ್ಲದೆ, ಸಮಾಜವನ್ನು ತಿದ್ದುವ ಕೆಲಸವನ್ನು ಈ ಕಥೆಗಳು ಖಂಡಿತವಾಗಿಯೂ ಮಾಡುತ್ತವೆ.

"ಸಾಹಿತಿಗೆ ಸಾಮಾಜಿಕ ಬದ್ಧತೆ, ಜವಾಬ್ದಾರಿಗಳಿರಬೇಕೆಂಬುದು ನನ್ನ ಅಚಲ ನಿಲುವು 'ಕಲೆಗಾಗಿ ಕಲೆ' ಎನ್ನುವ ಸೂತ್ರ ನನ್ನ ಮಟ್ಟಿಗೆ ಪವಿತ್ರವಲ್ಲ" ಎಂದು ದೇಜಗೌ ತಮ್ಮ ಸಾಹಿತ್ಯಕ ಧೋರಣೆಯನ್ನು ತಮ್ಮ ಪ್ರಸ್ತಾವನೆಯಲ್ಲಿ

ಖಚಿತಪಡಿಸಿ ಹೇಳಿದುದನ್ನು ಗಮನಿಸಬಹುದು. ಆದ್ದರಿಂದ ಮುಖ್ಯವಾಗಿ ನಾವು ಗಮನಿಸಬೇಕಾದ ಅಂಶವೆಂದರೆ ಇಲ್ಲಿ ಬರುವ ಕಥೆಗಳು ವಸ್ತು ಪ್ರಧಾನವಾದುವುಗಳಾಗಿ ನಮಗೆ ಮುಖ್ಯವಾಗುತ್ತವೆ. ಇನ್ನುಳಿದ ಅಂಶಗಳಾದ ತಂತ್ರ, ವಸ್ತುವಿನ ಪೋಷಕವಾಗಿ ಮಾತ್ರ ಬರುತ್ತದೆ. ಈ ಕತೆಗಳು ನಮಗೆ ಬೋಧಕವಾಗುವಂತೆಯೇ ಆಪ್ಯಾಯಮಾನವೂ ಆಗಿ, ನಮ್ಮ ಬುದ್ಧಿ, ಹೃದಯಗಳನ್ನು ಒರೆಗೆ ಹಚ್ಚಿ ಸಂಸ್ಕಾರವನ್ನುಂಟುಮಾಡುತ್ತವೆ. ದೇಜಗೌ ಅವರ ವ್ಯಕ್ತಿತ್ವಕ್ಕೆ ಅಂಟಿರುವ ಭಾವುಕತೆ ಹಾಗೂ ಅನೇಕ ವೇಳೆ ಆಕ್ರೋಶ ಬದಿಗೆ ಸರಿಸಿ ಅಲ್ಲಿ ಅನುಕಂಪವನ್ನು ತೇಲಿಬಿಟ್ಟಿದ್ದಾರೆ. ಇಲ್ಲಿನ ಕಥೆಗಳಲ್ಲಿ ಪ್ರಗತಿಶೀಲ, ನವ್ಯಕಥೆಗಳಲ್ಲಿ ಕಾಣ್ಕೆಯ ಕಾಣಲಿಕ್ಕೆ ಸಾಧ್ಯವಿಲ್ಲ. ಬದಲಾಗಿ ಮಾಗಿದ ಮನಸ್ಸಿನ ಚಿಂತನ ದರ್ಶನಗಳೇ ಇಲ್ಲಿ ಪ್ರಧಾನವಾಗುತ್ತವೆ. ಇವರ ಕಥೆಗಳು ನಮ್ಮ ಕಣ್ಣ ಮುಂದಿನ ಸಮಾಜದಲ್ಲಿ ಕಾಣುವ ಅಪಮೌಲ್ಯಗಳನ್ನು ತುಂಬಾ ಪರಿಣಾಮಕಾರಿಯಾಗಿ ಚಿತ್ರಿಸುತ್ತಾ ವಾಚಕನನ್ನು ಚಿಂತನಶೀಲನನ್ನಾಗಿಸುತ್ತದೆ. ಜೊತೆಗೆ ಒಂದು ಒಳ್ಳೆಯ ಮೌಲ್ಯಗಳತ್ತ ತಿರುಗಿ, ಸಮಾಜ ಶುದ್ಧಿಯಾಗಬೇಕು ಎನ್ನುವ ಅಂಶವನ್ನು ನಾವು ಕಾಣಬಹುದು.

'ದೇವರ ಮಗು' 'ವಾಲಿಬಾಲಿಗೆ ವಾಲಿದ ಹುಡುಗ' 'ಮಹಾಪಂಡಿತ ಕಾಲ್ಡ್‌ವೆಲ್ ಕಥೆ' ಇಂತಹವು ಮೌಲ್ಯಪ್ರತಿಪಾದನೆಯ ನೇರ ಕಥೆಗಳಾಗಿ ಮೂಡಿದರೆ, 'ಬಲಿ, ನಾ ಮಾಡಿದ ಕರ್ಮ' 'ಯಾವುದು ನ್ಯಾಯ', 'ತ್ಯಾಗ', 'ಎಂಥವನು ಹೇಗಾದ', 'ಸೇಡು', 'ಗೌಡಿಕೆ, 'ಭ್ರಷ್ಟ ಮುಖ್ಯೋಪಾಧ್ಯಾಯ', 'ಮನಃಸಾಕ್ಷಿ', 'ಪತ್ರವೊಂದರ ಆತ್ಮಕಥೆ' ಮುಂತಾದವೂ ಚಿಂತನಶೀಲವನ್ನಾಗಿಸಿ ಅದರ ಮೂಲಕ ಒಳ್ಳೆಯ ಮೌಲ್ಯಗಳನ್ನು ಕಂಡುಕೊಂಡು ಜೀವನದರ್ಶನವನ್ನು ಮೂಡಿಸುವಲ್ಲಿ ತುಂಬಾ ಪರಿಣಾಮಕಾರಿಯಾಗಿದೆ ಎಂದರೆ ಅತಿಶಯೋಕ್ತಿಯೇನಲ್ಲ.

ಲಂಚಕೋರತನ, ಭ್ರಷ್ಟಾಚಾರ, ಬಡತನ, ಶೋಷಣೆ, ಕುಡಿತ ಮುಂತಾದ ಪಿಡುಗುಗಳು ಈ ಸಂಕಲನದ ಕಥೆಗಳ ವಸ್ತುಗಳಾಗಿವೆ. ಇದಕ್ಕೆ ಅವರು ಸಾಹಿತ್ಯದಲ್ಲಿ ಸಾಮಾಜಿಕ ಬದ್ಧತೆ ಇರಬೇಕು ಎಂಬುದು ಕೊಡುವ ಕಾರಣ ಇಂಥ ಪಿಡುಗುಗಳ ಮೂಲಕವೂ ವ್ಯಕ್ತಿಗೆ ಮನೋದೌರ್ಬಲ್ಯ, ದುರಾಸೆ, ಕಾಮಲಾಲಸೆ, ಇರುವ ಅಂಶವನ್ನು ಕಥೆಗಾರರು ಮರೆಯುವುದಿಲ್ಲ. ಹೀಗಾಗಿ ಇಲ್ಲಿ ಹಲವು ಕತೆಗಳಲ್ಲಿ ಅದಮ್ಯಕಾಮ, ಕೇವಲ ಚಟವಾಗಿ ಬಿಡುವ ಅದರ ವಿಕೃತಿಯೂ ಬಲಿಷ್ಟಗೊಂಡು ದುರ್ಬಲರ ನಡುವಿನ ಶೋಷಕ ಶೋಷಿತ ಸಂಬಂಧವಾಗಿ ಬರುವುದನ್ನು ಇಂಥ ಕಡೆಗಳಲ್ಲಿ ಕಣ್ಣಿಗೆ ಕಟ್ಟಿದಂತೆ ದೇಜಗೌ ಚಿತ್ರಿಸಿದ್ದಾರೆ.

'ಬಲಿ': ಈ ಸಂಕಲನದ ಮೊದಲ ಕಥೆಯಾಗಿದೆ. ಈ ಕಥೆಯ ಮುಖ್ಯ ಕಥಾವಸ್ತು ಕುಟುಂಬದ ಯಜಮಾನರ ಕುಡಿತದ ಭೀಕರ ಪರಿಣಾಮವೇ ಆಗಿದೆ. ಇದು ತುಸು ಚಿಕ್ಕ ಕತೆ. ಆದರೂ ಅವರ ಅಭಿವ್ಯಕ್ತಿಯ ದೃಷ್ಟಿಯಿಂದ ಮನಸ್ಸನ್ನು ಕಲಕುತ್ತದೆ. ಕಥೆಯಲ್ಲಿ ಬರುವ ಪುಟ್ಟ ಚೆನ್ನಿಯಲ್ಲಿದ್ದ ತುಂಗಭದ್ರೆಯ ಪ್ರೀತಿ ಅದನ್ನು ಅಪ್ಪನೇ ಅಡವಿಡಲು ಒಯ್ದಾಗ ಅವಳ ಆಕ್ರಂದನ, ಉಕ್ಕಿಸುವ ಮಾತೃಶೋಕ ಇಂಥ ಅಂಶಗಳು ಈ ಕತೆಯಲ್ಲಿ ತುಂಬಾ ಪರಿಣಾಮಕಾರಿಯಾಗಿ ಚಿತ್ರಿತವಾಗಿರುವುದನ್ನು ಕಾಣಬಹುದು. ಗೌಡನ ಸ್ವಾರ್ಥ, ಗುಪ್ತಕಾಮ, ನಿಂಗವ್ವನ ಮೈದುನನ, ವಿವೇಕ, ಕಾಡಜ್ಜನ ಮೂರ್ಖತನ ಹೀಗೆ ಬೇರೆಬೇರೆ ಆಯಾಮಗಳನ್ನು ಪಡೆಯುತ್ತದೆ. ಈ ಕಥೆಯಲ್ಲಿ ಮುಖ್ಯವಾಗಿ ದೇಜಗೌ ಅವರ ಭಾವುಕತೆಯೇ ಒಂದು ರೀತಿಯಲ್ಲಿ ಕಲಾತ್ಮಕವಾಗಿ ಮೂಡಿಬಂದಿದೆ ಎಂದರೆ ಅತಿಶಯೋಕ್ತಿಯೇನಲ್ಲ.

ಸೀಮಾ: ಕತೆಯಲ್ಲಿನ ಮುಖ್ಯವಾದ ಪಾತ್ರವೆಂದರೆ ಸದಾಶಿವ. ದೇವಗೆರೆ ವಿಶ್ವವಿದ್ಯಾನಿಲಯದ ಕುಲಪತಿ. ಕುಲಪತಿಯ ಪದವಿಗೆ ಕಳಂಕ ತಂದ ಭ್ರಷ್ಟಾಚಾರಿ. 'ಹೆಂಡ, ಹೆಣ್ಣು' ಸಾಮಾಜಿಕ ಪಿಡುಗೇ ಆಗಿ ಇಲ್ಲಿ ಸಮರ್ಥವಾಗಿ ಚಿತ್ರಣಗೊಂಡಿದೆ. ಇವರ ಆಕ್ರಮಣಕ್ಕೆ ನಯವಂಚನೆಗೆ ಸಿಲುಕಿದ ಮುಗ್ಧಸೀಮಾ. ಸೀಮಾಳನ್ನು ಹೇಗೆ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡರು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಕುಡಿತ–ಕಾಮಲಾಲಸೆ, ಭ್ರಷ್ಟಚಾರ, ಕಣ್ಣಿಗೆ ರಾಚುವಂತಹ ನೈತಿಕ ಅಧಃಪತನ ಎಲ್ಲವೂ ಈ ಒಂದು ಸಣ್ಣಕಥೆಯಲ್ಲಿ ಹಿಡಿದಿಡುವ ಸಾಹಸವನ್ನು ಕಥೆಗಾರರು ಮಾಡಿರುವುದು ಶ್ಲಾಘನೀಯವಾದುದಾಗಿದೆ.

ಪ್ರೇಮಮೃತ್ಯು: ಬಸವರಜು ಮತ್ತು ಶಿಲ್ಪ ಇವರಿಬ್ಬರ ನಡುವೆ ಜಾತಿ ಸಮಸ್ಯೆ ಕಂಟಕವಾಗಿ ಬಂದು, ಹಿರಿಯರ ಅಂದರೆ ಸಂಪ್ರದಾಯಸ್ಥರ ಕೈಗೆ ಸಿಕ್ಕು ಶಿಲ್ಪಳ ತಂದೆ, ಪ್ರಿಯಕರ ಬಸವರಾಜುವನ್ನು ಇಲ್ಲವಾಗಿಸುವುದು, ನಂತರ ಶಿಲ್ಪ ಹುಚ್ಚಿಯಾಗಿ ಯಾತನೆ ಅನುಭವಿಸಿ ಕೊನೆಯುಸಿರೆಳೆಯುವುದು... ಈ ಕಥೆ ಒಂದು ರೀತಿಯಲ್ಲಿ ದುರಂತ ಕಥೆಯಾಗಿ ಮುಕ್ತಾಯವಾಗುತ್ತದೆ. ಈ ಕಥೆಯಲ್ಲಿ ಮತ್ತೊಂದು ಉಪಕಥೆ ಇದೆ. ಇದು ಮೂಲಕಥೆಗೆ ಹೆಚ್ಚಿನ ಮೆರುಗನನ್ನು ತಂದುಕೊಡುವಲ್ಲಿ ಯಶಸ್ವಿಯಾಗಿದೆ.

ನಾ ಮಾಡಿದ ಕರ್ಮ: ಕತೆಯಲ್ಲೂ ಕಾಮವಿಲಾಸದ ವಿಜೃಂಭಣೆಯಿದೆ. ಅದನ್ನು ಕಾಮದ ವಿವಿಧ ಮುಖಗಳನ್ನು ಕಥೆಗಾರರು ಚಿತ್ರಿಸುತ್ತಾರೆ. ಇಲ್ಲಿ ಭೋಗ

ವಿಲಾಸವಾಗಿ, ಬರಿಯ ತೆವಲು ತೀರಿಸಿಕೊಳ್ಳಲಿಕ್ಕೆ ದೇಹದ ಹಸಿವಿನ ಅನಿವಾರ್ಯತೆಯಿಂದ ಶೋಷಣೆಯೂ ಒಂದು ಮಗ್ಗುಲಾಗಿ ಬಂದು ಕಾಮದ ವಿಜೃಂಭಣೆ. ಬದುಕಿನ ಉತ್ಕಟ ಸಮಸ್ಯೆ ಇವುಗಳು ಒಂದೊಂದು ಸ್ಥಾನವನ್ನು ಪಡೆದುಕೊಳ್ಳುತ್ತವೆ. ಹಾಗೆಯೇ 'ಯಾವುದು ನ್ಯಾಯ'? 'ಇಜ್ಜೋಡು' ಕತೆಗಳಲ್ಲಿ ವಿವಾಹ ಬಾಹ್ಯ ಸಂಬಂಧಗಳನ್ನು ತೆರೆದುತೋರಿಸಿದ್ದಾರೆ.

ಮನಃಸಾಕ್ಷಿ: ಕತೆಯ ಲಿಂಗಣ್ಣ ಸ್ವಭಾವತಃ ಸಾತ್ವಿಕ ಧರ್ಮ ಬೀರು. ಇವರ ಕೆಲಸ ಬಸ್ ಕಂಡಕ್ಟರ್. ತನ್ನ ಹೆಂಡತಿಯ ಪ್ರಣಯಲೀಲೆ ಪ್ರಿಯಕರ ಶ್ರೀಕಂಠನ ಜೊತೆ ಕೂಡಿಕೆ ಮಾಡಿಸುವುದು ಇವೆಲ್ಲ ವಿಫಲ ದಾಂಪತ್ಯದ ವಸ್ತುವಾಗಿ ಕಥೆ ತುಂಬ ಮನೋಜ್ಞವಾಗಿ ಚಿತ್ರಿತವಾಗಿದೆ.

ಪತ್ರವೊಂದರ ಆತ್ಮಕಥೆ: ನಾಲ್ಕು ದಶಕಗಳಷ್ಟು ದೀರ್ಘಕಾಲ ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ದೇಜಗೌ ಅವರಿಗೆ, ಆ ಕ್ಷೇತ್ರದ ಅಧೋಗತಿ, ನೈತಿಕ ಮೌಲ್ಯಗಳ ಕುಸಿತ, ಅಪಾರ ವ್ಯಥೆಯನ್ನು ಹತಾಶೆಯನ್ನು ಉಂಟುಮಾಡುತ್ತದೆ. ಇಂಥ ಮೌಲ್ಯಗಳ ವಿಕೃತಸ್ವರೂಪದ ಭೀಕರತೆಯನ್ನು ಆಡಳಿತದ ಭ್ರಷ್ಟಚಾರ ನಿಧಾನಗತಿ, ನಿಷ್ಕ್ರಿಯತೆಗಳು, ಶೈಕ್ಷಣಿಕ ಕ್ಷೇತ್ರದ ಪ್ರಗತಿಗೂ ಹೇಗೆ ಬಾಧಕವಾಗಿದೆ ಎಂಬುದನ್ನು ತುಂಬಾ ಮನೋಹರವಾಗಿ ಚಿತ್ರಿಸಿದ್ದಾರೆ.

ವಾಲಿಬಾಲಿಗೆ ವಾಲಿದ ಹುಡುಗ: ನೌಕರನಾಗಿ, ಆದರ್ಶ ದೇಶಭಕ್ತನಾಗಿ, ವಿವಾಹಿತನಾಗಿ ಬೆಳೆದ ಹಳ್ಳಿ ಹುಡುಗಿಗೆ, ಓದಿನ ಕುತೂಹಲವನ್ನು ಕೆರಳಿಸುತ್ತಾನೆ. ಓದು ಕಲಿಸುತ್ತಾನೆ. ಅವಳು ಕೂಡ ಒಂದು ಹೊಸಹುಟ್ಟು ಪಡೆದಂತೆ, ಕುರುಡನಿಗೆ ಕಣ್ಣು ಬಂದಂತೆ ಹೆಳವನಿಗೆ ಕಾಲುಬಂದಂತೆ ಸಂತಸವ್ಯಕ್ತಪಡಿಸುತ್ತಾಳೆ.

ಸೇಡು: ಕಥೆಯಲ್ಲಿ ಡಿಗ್ರಿ ಮುಗಿಸಿದ ಕಣ್ಣೇಗೌಡನಿಗೆ ಹೈಸ್ಕೂಲು ಅಧ್ಯಾಪಕ ವೃತ್ತಿ ಬೇರೆ ಗ್ರಂಥಾಲಯ ವಿಜ್ಞಾನದ ಓದಿನ ನೆಪದಲ್ಲಿ ಮುಂಬಾಯಿಯ ಮೋಜುಬೇಕು. ಅವನ ಉದ್ಧಟತನ, ಭ್ರಷ್ಟಚಾರ, ಜೊತೆಗೆ ಅಧ್ಯಕ್ಷ ಉದ್ದಟ ನೌಕರರು ಶಿಕ್ಷಕರ ಸ್ಥಿತಿಗತಿಗಳನ್ನು ಈ ಕತೆಯಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ.

ಭ್ರಷ್ಟಮುಖ್ಯೋಪಾಧ್ಯಾಯ: ಶೈಕ್ಷಣಿಕ ಕ್ಷೇತ್ರದ ನೈತಿಕ ಅಧಃಪತನ ಈ ಕತೆಗಾರರನ್ನು ಸಾಕಷ್ಟು ಗಾಢವಾಗಿ ಚಿಂತೆಯುಂಟುಮಾಡಿದೆಂಬುದು ತಿಳಿದುಬರುತ್ತದೆ. ದೀನದಲಿತರ ಮತ್ತು ಹಳ್ಳಿಯ ಮಕ್ಕಳು ಅವಕಾಶ ವಂಚಿತರಾಗಿರುವುದು, ಪಟ್ಟಣದ ಮಕ್ಕಳೊಡನೆ ಅವರು ಜೊತೆಗೂಡಲು ಸಾಧ್ಯವಾಗದಿರುವುದು, ಆದರ್ಶ

ವಿದ್ಯಾಶಾಲೆಯ ಸ್ಥಾಪನೆಗೆ ಆಡಳಿತದ ಅಸಹಕಾರ, ಲಂಚಗುಳಿತನ, ನಾಯಕರ ತೀರ್ಪು, ಅಧಿಕಾರಿಗಳ ಉದ್ಧಟತನವನ್ನು ತುಂಬಾ ಮಾರ್ಮಿಕವಾಗಿ ಚಿತ್ರಿಸುತ್ತಾರೆ.

ಕೆಂಪು ಇಂಡಿಯನ್ ಆತ್ಮಕಥೆ: ನಮಗೆ ಜಾನಪದ ಜೀವನ ವ್ಯಾಖ್ಯಾನವಾಗಿ ಗಮನಸೆಳೆಯುತ್ತದೆ. ಇದು ಒಂದು ಜನಾಂಗದ ಕಣ್ಣು ತೆರೆಸುವ ಕಥೆಯಾಗಿ ಮೂಡಿಬಂದಿದೆ.

ಮಹಾಪಂಡಿತ ಕಾಲ್ಡ್‌ವೆಲ್‌ನ ಕಥೆ: ಭಾಷಾವಿಜ್ಞಾನಿ ಕ್ರಿಸ್ತಪಾದ್ರಿಯೊಬ್ಬನ ಜ್ಞಾನದಾಹದ ಕಥೆಯಾಗಿದೆ.

ನಟಸಾರ್ವಭೌಮನ ಪೀಕಲಾಟ: ಸಂದರ್ಭಗಳನ್ನು ವಿವರಿಸುತ್ತಾ ಒಳ್ಳೆಯ ಕಥಾತಂತ್ರವೇ ಮೈಗೂಡಿ ಬಂದಿರುವ ಕಥೆ ಇದು. ಸಂಕಲನ ಒಳ್ಳೆಯ ಕಥೆಯಾಗಿ ಮೂಡಿಬಂದಿದೆ. ಸಹಜತೆ, ಸಂಕೀರ್ಣತೆ ಸೂಕ್ಷ್ಮ ಸ್ವರೂಪವನ್ನು ಅನುಭವಕ್ಕೆ ದಕ್ಕುವಂತೆ ಚಿತ್ರಿಸುವ ಕಥೆಗಾರಿಕೆ ಈ ಕಥೆಯಲ್ಲಿದೆ.

ಕಳ್ಳಯಾರು: ಕಥೆ ನಮಗೆ ಹೆಜ್ಜೆಹೆಜ್ಜೆಗೂ ಕುತೂಹಲವನ್ನುಂಟುಮಾಡುವ ಕಥೆಯಾಗಿದೆ. 'ಮನುಷ್ಯದೇವರ ಸೃಷ್ಟಿಯಾದರೆ, ಕಳ್ಳ ಸಮಾಜದ ದೃಷ್ಟಿ' ಎಂದು ಹೇಳುತ್ತಾ ಕಥೆಯ ನಾಯಕ ಕಳ್ಳ ಬಸವನ ಪ್ರಯೋಗ ಪರಿಣತಿ ತುಂಬ ಸ್ವಾರಸ್ಯವಾಗಿ ಚಿತ್ರಿಸುತ್ತಾರೆ.

ದೇವರಮಗು: ಈ ಸಂಕಲನದ ಎರಡನೆಯ ಕಥೆ. ಸಂಕಲನದ ಶೀರ್ಷಿಕೆಯೂ ಹೌದು. ಇಲ್ಲಿ ಬರುವ ವಸ್ತು. 'ಮುದ್ದು ಮಗು ದೇವರಿತ್ತ ಮಗುವನ್ನು ಆ ದೇವರೇ ಸೆಳೆದುಕೊಂಡ ದುರಂತ, ಭಾವುಕತೆ ಈ ಕತೆಯ ಕಥಾವಸ್ತು ಎಂದರೆ ತಪ್ಪಲ್ಲ. ದೇಜಗೌ ಅವರ ವ್ಯಕ್ತಿತ್ವಕ್ಕೆ ಅಂಟಿಕೊಂಡಿರುವ ಭಾವುಕತೆ ಈ ಕಥೆಯಲ್ಲಿ ಎದ್ದುಕಾಣುತ್ತದೆ.

ಈಗಾಗಲೇ ಗಮನಿಸಿರುವಂತೆ ಸಾಮಾಜಿಕ ಬದ್ಧತೆ, ಶೋಷಣೆ, ಭ್ರಷ್ಟಾಚಾರ, ತಿದ್ದಲಾಗದಷ್ಟು ಕೆಟ್ಟು ಹೋಗಿರುವ ವ್ಯವಸ್ಥೆ, ಅದಮ್ಯಕಾಮ, ಇವುಗಳ ಚಿತ್ರಣ ಉಳಿದೆಲ್ಲ ಕಥೆಗಳ ಮುಖ್ಯ ಜೀವಾಳವಾಗಿ ಮೂಡಿಬಂದರೆ, ಜೊತೆಗೆ ಗ್ರಾಮೀಣ ಜಗತ್ತು, ನಗರಕ್ಕೆ ಬಂದ ಗ್ರಾಮೀಣ ಭಾಷೆಯ ಕಸುವು, ಬನಿ, ಪಾತ್ರಸನ್ನಿವೇಶಗಳು ಅಗತ್ಯಕ್ಕನುಗುಣವಾಗಿ ಆಗಿ ಬಂದಿದೆ. ಮೌಲ್ಯಗಳ ಬಲಿ, ಆದರ್ಶಗಳ ಬಲಿ, ಮುಗ್ಧಜೀವಿಗಳ ಬಲಿ, ಸುಂದರ ಕನಸುಗಳ ಬಲಿ. ಹೀಗೆ ಹಲವಾರು ವಿಷಯಗಳ ಎಳೆಗಳನ್ನು ಇಲ್ಲಿನ ಕಥೆಗಳಲ್ಲಿ ನಾವು ಗಮನಿಸಬಹುದು.

ದೇಜಗೌ ಅವರು ಇಲ್ಲಿನ ಕತೆಗಳಲ್ಲಿ ಗ್ರಾಮೀಣ ಸೊಗಡಿನ ಶಬ್ದಗಳನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದಕ್ಕೆ 'ತೊಟ್ಟಿ ಚೆಂದುಳ್ಳಿ' 'ಬತ್ತೀನಿ' 'ಒದ್ದೋರು' 'ಕುವ್ವೆ ಕುವ್ವೆ', ಇಸ್ಕೂಲು, ಪಡ್ಡೆ, ಕುಳುಂಪೆ, ಹಳಹಳಿಸು, ಹುರುಪು, ಬೆಂಟು, ಲಂಗಾಯ್ಸು, ಹುಟ್ಟು ಸುಳಿ ಹೀಗೆ ತೆಕ್ಕೆತೆಕ್ಕೆಯಾಗಿ ಗ್ರಾಮೀಣ ಪದಗಳಿಂದ ಪುಷ್ಟಗೊಂಡ ಭಾಷೆ ಇಲ್ಲಿಯ ಕಥೆಗಳ ಪುಟಪುಟದಲ್ಲೂ ರಾರಾಜಿಸುತ್ತದೆ. ಬದುಕಿನ ನೈಜವಾಗಿ ಚಿತ್ರಿಸಲು ದೇಜಗೌ ಕತೆಗಳಲ್ಲಿ ಬಳಸುವ ವಾಕ್ಯ ವಾಕ್ಯ ವೃಂದಗಳಿಗೆ ಕಡಿಮೆಯೇನಿಲ್ಲ.

"ಹೊತ್ತು ಹುಟ್ಟಿ ನಾಲ್ಕಾಳು ಬಂದರೂ, ಮೇಯಿಸಲೂ ಹಸುವಿಲ್ಲ, ಬೇಯಿಸಲು ಹಿಟ್ಟಿಲ್ಲ" – ಇವು ಹೊಸ ಹೊಸ ಶಬ್ದಗಳ ಸೃಷ್ಟಿಯಾಗಿ ದೇಜಗೌ ಅವರ ಪ್ರತಿಭೆಯ ವಿಲಾಸಗಳ ಕೂಪ ಕಾಣಬಹುದು. 'ನೀಗಾಣಿಕೆ', 'ಪೆಗ್ಗುಸಿಗ್ಗು', 'ತದ್ರೂಪು ಜೆರಾಕ್ಸ್ ಪ್ರತಿ, ಕಿತಾಪತಿ ಕ್ರಿಮಿ, ಬೇಹೊಣೆಗಾರ, ವೇಳಾಯಿತರು ಮುಂತಾದ ಗ್ರಾಮೀಣ ಹಿನ್ನೆಲೆಯ ಶಬ್ದಗಳನ್ನು ಟಂಕಿಸಿಬಿಡುತ್ತಾರೆ.

ಇಲ್ಲಿ ಕಥೆಗಳಲ್ಲಿ ವಸ್ತು ವಿಷಯ ಪ್ರಧಾನವಾಗಿ ಕಂಡುಬಂದು, ಕಥಾತಂತ್ರವನ್ನು ತುಂಬ ತೆಳುವಾಗಿ ತಂದುಬಿಡುತ್ತಾರೆ. ಆದರೂ ಬರಿಯ ಹೇಳಿಕೆಯಾಗದಂತೆ, ಬಹಳ ವೈವಿಧ್ಯತೆಯಿಂದ ತಂದಿರುವುದೂ ಕೂಡ ಒಂದು ಮೌಲ್ಯವೆಂದೇ ಹೇಳಬೇಕು, ಹಲವಾರು ಕಥೆಗಳಲ್ಲಿ ಕಥೆಗಾರರ ಸಮೃದ್ಧಿ ಅನುಭವ ಎದ್ದುಕಾಣುತ್ತದೆ. ಕಥೆಗಳ ಶೀರ್ಷಿಕೆಗಳು ಬಹುಮಟ್ಟಿಗೆ ಸರಳವಾಗಿ ಕಂಡುಬಂದರೂ ಸಂಕೀರ್ಣತೆಯಿಂದ ಕೂಡಿರುವುದನ್ನು ನಾವು ಮರೆಯಲಿಕ್ಕೆ ಸಾಧ್ಯವಿಲ್ಲ. ಏನೇ ಇರಲಿ ದೇಜಗೌ ಕಥಾ ಜಗತ್ತಿಗೆ ತೀರಾ ತಡವಾಗಿ ಬಂದರೂ ಕನ್ನಡ ನಾಡು ಸಂಸ್ಕೃತಿಗೆ ಕಥಾ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆಯನ್ನು ಇತ್ತಿದ್ದಾರೆ. ಇಲ್ಲಿಯ ಕಥೆಗಳು ಅವರ ಪ್ರತಿಭೆಯ ಖನಿಯಿಂದ ಮೂಡಿ ಬಂದ ಕಥೆಗಳಾಗಿವೆ. ಇದು ಒಂದು ಮಹತ್ವದ ಕೃತಿಯಾಗಿ ಚಿರವಾಗಿ ನಿಲ್ಲುವ ಕೃತಿಯೂ ಕೂಡ ಹೌದು.

ನಗ್ನಚಿತ್ರಗಳು ಕಾದಂಬರಿ ಒಂದು ವಿಶ್ವವಿದ್ಯಾನಿಲಯ ಹಾಗೂ ಒಂದು ವಿಭಾಗವನ್ನು ಸಾಂಕೇತಿಕವಾಗಿ, ಇಟ್ಟುಕೊಂಡು ಪ್ರೊ. ದೇಜಗೌರವರು ಈ ದೇಶದ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲಿ ನಡೆಯುತ್ತಿರುವ ಒಳವ್ಯವಹಾರಗಳ ದುರಂತಮಯ ಬದುಕನ್ನು ಯಶಸ್ವಿಯಾಗಿ ಚಿತ್ರಿಸಿದ್ದಾರೆ. ಕಾದಂಬರಿಗೆ ಇಟ್ಟಿರುವ 'ನಗ್ನಚಿತ್ರಗಳು' ಎಂಬ ಶೀರ್ಷಿಕೆ ತುಂಬ ಅರ್ಥಪೂರ್ಣವಾಗಿದೆ. ಕಾದಂಬರಿಯಲ್ಲಿ ನೀತಿಗೆಟ್ಟವರ

ಹಿಂದೇ ತುಂಬಿಕೊಂಡಿದೆ. ಅಲ್ಲಿ ಬರುವ ಪಾತ್ರಗಳು ಒಂದಲ್ಲ ಒಂದು ರೀತಿಯಲ್ಲಿ ನೈತಿಕತೆಯು ಅಪಮೌಲ್ಯೀಕರಣಗೊಳ್ಳುತ್ತಿರುವುದು ಕಾಣಿಸಿಕೊಳ್ಳುತ್ತದೆ. ಕಾದಂಬರಿಯ ವಸ್ತುವಿನಲ್ಲಿ ಹೊಸತನವಿದೆ. ಪ್ರೊ. ದೇಜಗೌರವರು ಬಹಳ ಸೊಗಸಾಗಿ ಚಿತ್ರಿಸಿದ್ದಾರೆ. ವಸ್ತುವಿನ್ಯಾಸದಲ್ಲಿ ಮೆರೆದಿರುವ ಕೌಶಲ್ಯ ಅದ್ಭುತ-ವಾದುದಾಗಿದೆ. ಕಾಲ್ಪನಿಕ ವಿಶ್ವವಿದ್ಯಾನಿಲಯವಾದ ದೇವಗೆರೆ ವಿಶ್ವವಿದ್ಯಾನಿಲಯ-ವನ್ನು ಬದಿಗಿಟ್ಟು ನೋಡಿದಾಗ ಎಲ್ಲಾ ವಿಶ್ವವಿದ್ಯಾನಿಲಯಗಳ ಚರಿತ್ರೆಯೂ ಅದೇ ಅನ್ನಿಸುತ್ತದೆ. ನಮ್ಮ ದೇಶದಲ್ಲಿ ಈ ಕೆಟ್ಟ ರಾಜಕೀಯ ಮತ್ತು ಜಾತಿಪದ್ಧತಿ ಇರುವ ತನಕ 'ನಗ್ನಚಿತ್ರಗಳು' ಕಾದಂಬರಿಯ ವಸ್ತು ಹಳತಾಗುವುದಿಲ್ಲ; ಬದಲಾಗಿ ವರ್ತಮಾನದೊಡನೆ ಮಿಡಿಯುತ್ತಿರುತ್ತದೆ ಎನ್ನಬಹುದು.

ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಎಲ್ಲಾ ಪಾತ್ರಗಳನ್ನು ಕಾದಂಬರಿಕಾರರು ಸಹಜ ಸುಂದರವಾಗಿ ಚಿತ್ರಿಸಿದ್ದಾರೆ. ಇಲ್ಲಿಯ ಯಾವುದೇ ಪಾತ್ರಗಳು ಕೃತಕತೆಗೆ ಎಡೆಮಾಡಿಕೊಡದೆ ನೈಜವಾಗಿ ಕಾದಂಬರಿಯಲ್ಲಿ ಮೂಡಿಬಂದಿವೆ. ಮೊಟ್ಟಮೊದಲ ಸೃಜನಶೀಲ ಕಾದಂಬರಿಯಲ್ಲೇ ಒಂದು ಯಶಸ್ವಿ ಕಾದಂಬರಿಯನ್ನು ನಿರ್ವಹಿಸ-ಬೇಕಾದ ಎಲ್ಲ ಗುಣಗಳೂ ಪ್ರೊ. ದೇಜಗೌರವರಲ್ಲಿ ಹಾಸುಹೊಕ್ಕಾಗಿರುವುದು ಹೆಮ್ಮೆಯ ವಿಷಯವಾಗಿದೆ.

***

# ಅಧ್ಯಾಯ – ೬
# ಉಪಸಂಹಾರ

ಪ್ರೊ. ದೇಜಗೌರವರು ನುಡಿದಂತೆ ನಡೆದಂತವರು. ಇದರಿಂದಾಗಿ ಅವರ ಸಾಹಿತ್ಯಕ್ಕೂ ವೈಯಕ್ತಿಕ ಜೀವನಕ್ಕೂ ವ್ಯತ್ಯಾಸವೇ ಇಲ್ಲ. ಸದಾ ಮಾನವೀಯ ಅಂತಃಕರಣದ ಲೇಖಕರಾಗಿ ಮೌಲ್ಯಗಳಿಗೆ ಹೆಚ್ಚು ಒತ್ತನ್ನು ಕೊಟ್ಟರು. ಮಾನವರು ಮಾನವರಾಗಿಯೇ ಬದುಕಬೇಕೆನ್ನುವುದು ಇವರ ಮೂಲ ಆಶಯವಾಗಿದೆ. ಜಾತಿಯತೆ, ಅಸಮಾನತೆ, ಪ್ರಗತಿಹೀನತೆ ಮತ್ತು ಶಾಂತಿಭಂಗ ಶಕ್ತಿಗಳು ಪ್ರೊ. ದೇಜಗೌರವರ ಕಡುವಿರೋಧಿ ನಿಲುವುಗಳಾಗಿವೆ. ನೈಜಬದುಕಿನಲ್ಲಿ ಮತ್ತು ಇವರ ಸಾಹಿತ್ಯದಲ್ಲಿ ಇವುಗಳ ವಿರುದ್ಧದ ಸೊಲ್ಲನ್ನು ಪ್ರಧಾನವಾಗಿ ಗುರುತಿಸಬಹುದು. ಇವರು ರಚಿಸಿರುವ ಒಟ್ಟು ಕಥಾಸಾಹಿತ್ಯ ರಚನೆ ಸಮಾಜದ ಒಳಿತಿಗೆ ಪೂರಕವಾಗಿದೆ. ಆದ್ದರಿಂದಲೇ ಅವರು ಅವಾಸ್ತವಕ್ಕಿಂತ ಹೆಚ್ಚಾಗಿ ವಾಸ್ತವತೆಗೆ ಹೆಚ್ಚಿನ ಗಮನ ನೀಡುತ್ತಾರೆ. ಎಂತಲೇ ಕಥೆ, ಕಾದಂಬರಿಯಲ್ಲಿ ಅವಾಸ್ತವಿಕ ಎನಿಸಿದರೂ ವಾಸ್ತವಿಕ ನೆಲೆಯಲ್ಲಿ ಕಾಣಬರುತ್ತವೆ. ತಮ್ಮ ಬದುಕಿನಲ್ಲಿ ಕಣ್ಣಾರೆ ಕಂಡ ಅಥವಾ ಅನುಭವಿಸಿದ ಘಟನೆಗಳೇ ಪ್ರಧಾನವಾಗಿ ಇವರ ಕಥಾ ಸಾಹಿತ್ಯದ ವಸ್ತುವಾಗಿರುವುದನ್ನು ಗುರುತಿಸಬಹುದು. ತೀವ್ರತರವಾದ ಸಾಮಾಜಿಕ ಕಳಕಳಿ ದೇಜಗೌರವರ ಕಥಾಸಾಹಿತ್ಯದಲ್ಲಿ ಹಾಸುಹೊಕ್ಕಾಗಿರುವುದನ್ನು ನೋಡಬಹುದಾಗಿದೆ. ಇವರ ಒಟ್ಟು ಕಥಾಸಾಹಿತ್ಯವನ್ನು ಗಮನಿಸಿದಾಗ ಅನ್ಯಾಯದ ಬಗೆಗಿನ, ಸಾಮಾಜಿಕ ಹುಳುಕುಗಳ ಬಗೆಗಿನ ನೋವಿದೆ. ವಿಷಾದವಿದೆ, ಆಕ್ರೋಶವಿದೆ ಇವೆಲ್ಲವೂ ಪ್ರಧಾನವಾಗಿ ಕಥಾಸಾಹಿತ್ಯದಲ್ಲಿ ಕಂಡುಬರುತ್ತದೆ.

ಸ್ವಾರ್ಥ, ನೈತಿಕ ಅಧಃಪತನ, ವರದಕ್ಷಿಣೆ, ಮಲತಾಯಂದಿರ ಕಿರುಕುಳ, ಪ್ರೀತಿ–ಪ್ರೇಮ, ಅಲೆಮಾರಿ ಬದುಕು, ಮದ್ಯಪಾನ, ಷಂಡತನ, ವ್ಯವಸ್ಥೆಯ ಕಿರುಕುಳ ಹೇಗೆ ಹತ್ತು ಹಲವು ಸಾಮಾಜಿಕ ಅನಿಷ್ಟಗಳು ಪ್ರೊ. ದೇಜಗೌರವರ ಸಣ್ಣಕಥೆಗಳ ವಸ್ತುವಾಗಿದೆ. ಇವರು ತಮ್ಮ ಜೀವಿತದ ಬಹುಪಾಲು ಅವಧಿಯನ್ನು ಪಟ್ಟಣದಲ್ಲಿ ಕಳೆದರೂ ಸಹ, ಗ್ರಾಮ್ಯಜೀವನದ ದಟ್ಟ ಅನುಭವ ನುಡಿಗಳು ಸೃಜನಶೀಲವಾಗಿ ಪ್ರಧಾನವಾಗಿ ಕಂಡುಬರುತ್ತದೆ. ಗ್ರಾಮೀಣ ಪ್ರದೇಶದ ಸಮಸ್ಯೆಗಳು ಇವರಿಗೆ ಇಲ್ಲಿ ಮುಖ್ಯವಾಗಿವೆ. ಈ ದಿಸೆಯಲ್ಲಿ ಇವರು ಸಕಾರಾತ್ಮಕವಾಗಿ ದುಡಿದಿದ್ದಾರೆ, ಪ್ರತಿಕ್ರಿಯಿಸಿದ್ದಾರೆ.

ಪ್ರೊ. ದೇಜಗೌ ಕನ್ನಡ ಕಥಾಸಾಹಿತ್ಯಕ್ಕೆ ಅವಿಸ್ಮರಣೀಯವಾದ, ಉಜ್ವಲ ವಿಶಿಷ್ಟಕಾಣಿಕೆಯನ್ನು ಕೊಟ್ಟಿದ್ದಾರೆ. ಕಥೆಗಳಲ್ಲಿ 'ಸಮೃದ್ಧತೆ' ಎದ್ದು ಕಾಣುವ ಅಂಶ. ಭಾವಸಮೃದ್ಧಿ, ವಿಷಯ ಸಮೃದ್ಧಿ, ಸೂಕ್ಷ್ಮದೃಷ್ಟಿ, ವಾಸ್ತವ ಶ್ರೀಮಂತಪ್ರಜ್ಞೆಯ ವೈವಿಧ್ಯಮಯ ಜೀವನಾನುಭವದ ಕಲ್ಪಾನಾವಿಲಾಸವಿದೆ. ಭಾಷೆಯಂತೂ ಬಹಳ ಗಟ್ಟಿಯಾಗಿ ಬೆಳೆಸಿದ್ದಾರೆ. 'ಸಾಮಾಜಿಕ ಬದ್ಧತೆ ದೇಜಗೌರವರಿಗೆ ಇರುವುದರಿಂದ ಸಮಾಜದ ಕಲ್ಮಷಗಳ ಬಗ್ಗೆ ಸದಾ ಸಿಡಿದೇಳುತ್ತಾರೆ. ಅವರು ಕೊಡುವ ಕಥೆಗಳ ಶೀರ್ಷಿಕೆಗಳಿಂದಲೇ ಅದು ವೇದ್ಯವಾಗುತ್ತದೆ. ಜೀತ, ವಿಶ್ವಾಸದ್ರೋಹ' 'ಕುರುಡು ತಂದೆ, ವೀರಣ್ಣನ ಮದುವೆ' ಸ್ವರ್ಗದವರು ಧರೆಗಿಳಿದಾಗ, ಅಜ್ಞಾತ ಸತ್ಯಾರಾಧಕ, ಸತ್ಯವಂತರಿಗಿದು ಕಾಲವಲ' 'ಹೆಣ್ಣಿಗೆ ಹೆಣ್ಣೆ ಹಗೆ' ಮರಿಲಿಂಗಯ್ಯನ ದಶಾವತಾರ, ವಾಲಿಬಾಲಿಗೆ ವಾಲಿದ ಹುಡುಗ' 'ಮಹಾಪಂಡಿತ ಕಾಲ್ಡ್‌ವೆಲ್ ಕಥೆ' 'ಬಲಿ' 'ನಾ ಮಾಡಿದ ಕರ್ಮ', 'ಯಾವುದು ನ್ಯಾಯ', 'ತ್ಯಾಗ' ಎಂಥವನು ಹೇಗಾದ 'ಸೇಡು' 'ಗೌಡಿಕೆ' 'ಭ್ರಷ್ಟಮುಖ್ಯೋಪಾಧ್ಯಾಯ' ಹೀಗೆ ಹಲವಾರು ಕಥೆಗಳು ನಮ್ಮನ್ನು ಚಿಂತನಶೀಲಗೊಳಿಸುತ್ತವೆ. ಆ ಮೂಲಕ ಮೌಲ್ಯಗಳನ್ನು ಹುಡುಕುವ ಜೀವನದರ್ಶನ ಕಂಡುಕೊಳ್ಳುವ ದರ್ಶನ ಇವರ ಕಥಾಸಾಹಿತ್ಯದಿಂದ ದೊರೆಯುತ್ತದೆ.

ವಿಶ್ವವಿದ್ಯಾನಿಲಯಗಳು ಅನೈತಿಕ ಮಾರ್ಗದಲ್ಲಿ ಇಂದು ನಡೆಯುತ್ತಿರುವ ಬಗೆಯನ್ನು 'ನಗ್ನಚಿತ್ರಗಳು' ಕಾದಂಬರಿಯಲ್ಲಿ ಲೇಖಕರು ಬಯಲುಮಾಡಿದ್ದಾರೆ. ವಿಶ್ವವಿದ್ಯಾನಿಲಯಗಳಲ್ಲಿ ನಡೆಯುವ ಭ್ರಷ್ಟಾಚಾರ, ಅನೀತಿ, ಅನಾಚಾರ, ಕರಾಳ ಬದುಕನ್ನು ತಮ್ಮ ಕಾದಂರಿಯ ಮೂಲಕ ಬಯಲಿಗೆಳೆದಿದ್ದಾರೆ. ವಿಶ್ವವಿದ್ಯಾನಿಲಯಗಳು ಪ್ರಾಮಾಣಿಕವಾಗಿ ಪ್ರತಿಭಾವಂತರನ್ನು ಗುರುತಿಸಿ ಈ ರಾಷ್ಟ್ರಕ್ಕೆ, ರಾಜ್ಯಕ್ಕೆ ಸಮರ್ಥಿಸಬೇಕೆಂಬ ಮುಖ್ಯ ಆಶಯವನ್ನು ಇವರು ಕಾದಂಬರಿಯಲ್ಲಿ ವ್ಯಕ್ತಪಡಿಸಿದ್ದಾರೆ. ಅದನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಹೀಗೆ ಪ್ರೊ. ದೇಜಗೌ ಸಾಹಿತ್ಯದ ಸರ್ವ ಪ್ರಕಾರದಲ್ಲೂ ಅಪಾರ ಕೃಷಿಮಾಡಿದ್ದರೂ ಕನ್ನಡ ಕಥಾ ಸಾಹಿತ್ಯಕ್ಕೆ ಕೊಟ್ಟಿರುವ ಕೊಡುಗೆಯನ್ನು ಮರೆಯಲಾಗದು. ಅವರು ಒಟ್ಟು ಕಥಾಸಾಹಿತ್ಯವನ್ನು ವಸ್ತುನಿಷ್ಠವಾಗಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ.

***

## ಪರಾಮರ್ಶನ ಗ್ರಂಥಗಳು

೧. ನಗ್ನಚಿತ್ರಗಳು – ಪ್ರೊ. ದೇಜಗೌ

೨. ಜೀತ ಮತ್ತು ಇತರ ಕಥೆಗಳು – ದೇಜಗೌ

೩. ದೇವರ ಮಗು ಮತ್ತು ಇತರ ಕಥೆಗಳು – ದೇಜಗೌ

೪. ಅನಿಕೇತನದಲ್ಲೊಂದು ವಿಶ್ವಚೇತನ – ಡಾ. ಟಿ.ಕೆ.ಕೆಂಪೇಗೌಡ

೫. ಭಾಷೆ ಸಾಹಿತ್ಯ ಸಂಸ್ಕೃತಿಗೆ ಪ್ರೊ. ದೇಜಗೌರವರ ಕೊಡುಗೆ – ಡಾ. ಟಿ.ಕೆ.ಕೆಂಪೇಗೌಡ

೬. ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ – ಡಾ. ಎನ್.ಕೆ.ಕೋದಂಡರಾಮ

೭. ಹೋರಾಟದ ಬದುಕು – ಪ್ರೊ. ದೇಜಗೌ

೮. ಇಂಥ ಪ್ರೀತಿಯ ನಾವೆ ; ಡಾ. ಜಿ.ವಿ.ಆನಂದಮೂರ್ತಿ

೯. ಪ್ರೊ. ಡಿ.ಲಿಂಗಯ್ಯನವರ ಸಾಹಿತ್ಯ – ಡಾ. ಸ.ಶಿಶಿರಾ

೧೦. ತೇಜಸ್ವಿ ಕಥನ – ಟಿ.ಪಿ.ಅಶೋಕ

೧೧. ಹೋರಾಟದ ಬದುಕು – ಪ್ರೊ. ದೇಜಗೌ

***